

## ದೇಣಿಗೆ

ಮಲ್ಲೇಶಪ್ಪ ಸಿರ್ಸ್ಯಾಡ ಮತ್ತು
ಮಹದೇವಿ ಸಿರ್ಸ್ಯಾಡ ದಂಪತಿಗಳು
ಮಹಾಮನೆ ಮಾಸಪತ್ರಿಕೆಯನ್ನು
ಮೆಚ್ಚಿ ೧೧,೦೦೦ರೂ. ದೇಣಿಗೆ ನೀಡಿದ್ದಾರೆ.

## ಕ್ಷೇತ್ರ ವಾರ್ತೆಗಳು




ಬೆಂಗಳೂರು ಕೇಂದ್ರ ಕಛೇರಿ: "ವಚನ ದಿನ" ಕಾರ್ಯಕ್ರಮ ಹಾಗೂ ವಚನ ಪಿತಾಮಹ ಡಾ. ಫ.ಗು. ಹಳಕಟ್ಟಿ ದತ್ತಿ ಹಾಗೂ ಲಿಂ. ಕೆ. ಚಂದ್ರಶೇಖರ್ ಸ್ಮರಣೆ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಗುರುಪ್ರಸಾದ್ ಕುಚ್ಚಂಗಿ, ದಿಬ್ಬೂರು ವಿ. ಗಿರೀಶ್, ದಿಬ್ಬೂರು ಸಿದ್ಧಲಿಂಗಪ್ಪ, ಸ್ನೇಹಾ, ಶಶಿಮೋಹನ್, ವಿದ್ಯಾರಣ್ಯ




ಬಾಗಲಕೋಟೆ: "ವಚನ ದಿನ" ಕಾರ್ಯಕ್ರಮ ಹಾಗೂ ಲಿಂ. ರಾಚಮ್ಮ ಮತ್ತು ಲಿಂ. ಗುರಪ್ಪ ಭಗವತಿ ಇವರ ಸ್ಮರಣಾರ್ಥ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ವೇದಿಕೆಯಲ್ಲಿ: ಡಾ.ಎಸ್.ಕೆ. ಬಂಗಾರಿ, ಬಸವರಾಜ ಭಗವತಿ, ಸುಪ್ರೀತ ಪಾಟೀಲ, ಆರ್.ಎನ್. ಜೋಶಿ, ಬಸವರಾಜ ಮುಕ್ಕುಪ್ಪಿ



# ಮಹಾಮನೆ

ನವೆಂಬರ್ ೨೦೨೦ ಸಂಪುಟ : ೨೩ ಸಂಚಿಕೆ : ೦೪




ಪ್ರಕಾಶಕರು
ಶ್ರೀ ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು



ಆಡಳಿತ ಕಾರ್ಯಾಲಯ
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೧ನೆಯ ಮುಖ್ಯರಸ್ತೆ,
ಜಯನಗರ ೮ನೆಯ ವಿಭಾಗ,
ಬೆಂಗಳೂರು – ೫೬೦ ೦೭೦
ದೂ: ೦೮೦ – ೨೯೭೭ ೦೧೨೫
E-mail:
mahamanemagazine@gmail.com


### ಸಂಚಿಕೆಯ ಅಂತರಂಗ

ಬಿನ್ನಹ

# ಅಡಿಯ ಹೆಣ್ಣು ಮಾಡಿ ಒಡೆತನದ ಗಂಡು ಮಾಡಿ

"ಏನಾದರೂ ಆಗು ಮೊದಲು ಮಾನವನಾಗು" ಎನ್ನುವ ಕುವೆಂಪು ಅವರ ಮಾತು ನಮ್ಮ ಈ ಕಾಲದ ಕಡುಕಷ್ಟದ ಅಗ್ನಿಪರೀಕ್ಷೆಯನ್ನು ಧ್ವನಿಸುತ್ತಿದೆ. ಜಗತ್ತು ಸಾಧಿಸಿರುವ ಅನೂಹ್ಯವಾದ ತಾಂತ್ರಿಕ ಸಿದ್ಧಿ ಸಾಧನೆಗಳು ಮನುಷ್ಯರನ್ನು ನಾಗರಿಕತೆಯ ಉತ್ತುಂಗಕ್ಕೆ ಏರಿಸಿದೆ ಎನ್ನುವ ಮಾತು ಮತ್ತೆ ಮತ್ತೆ ಕೇಳುತ್ತಲೇ ಇರುತ್ತದೆ. ಆದರೆ, ಈ ಇಂಥ ಲಕ್ಷಾಂತರ ಸಾಧನೆಗಳೆಲ್ಲವೂ ನಿರರ್ಥಕವೆನಿಸುವ ವಿದ್ಯಮಾನಗಳು ಸಮಕಾಲೀನ ಜಗತ್ತಿನಲ್ಲಿ ಘಟಿಸುತ್ತಿದೆ. ಇತ್ತೀಚಿನ ದಿನಗಳಲ್ಲಿ ಹೆಣ್ಣು ಮಕ್ಕಳ ಮೇಲೆ ಆಗುತ್ತಿರುವ ಮೃಗೀಯ ಧಾಳಿಗಳು ನಾವು ನಾಗರೀಕರೂ ಅಲ್ಲ, ಮಾನವರೂ ಅಲ್ಲ ಎನ್ನುವುದನ್ನು ಸಂದೇಹಾತೀತವಾಗಿ ಸಾಬೀತುಪಡಿಸುತ್ತಿವೆ.

ಕೆಲವು ದಿನಗಳ ಹಿಂದೆ ಘಟಿಸಿದ ಹತ್ರಸ್ ಮಹಿಳೆಯ ಸಾವು ನಮ್ಮನ್ನು ಅಸಹಾಯಕ ಮೌನಕ್ಕೆ ತಳ್ಳಿವೆ. ನಿಜ, ಜಗತ್ತಿನಾದ್ಯಂತ ಇದರ ಬಗ್ಗೆ ಆಕ್ರೋಶ ವ್ಯಕ್ತವಾಗುತ್ತಿದೆ, ಕೊನೆಯಿಲ್ಲದಂತೆ ಮಾತುಗಳನ್ನೂ ನಾವೆಲ್ಲರೂ ಆಡುತ್ತಲೇ ಇದ್ದೇವೆ. ಆದರೆ, ಈ ಮಾತುಗಳಿಗೆ ಏನಾದರೂ ಶಕ್ತಿಯಿದೆಯೇ? ಮಾತು ತನ್ನ ಶಕ್ತಿಯನ್ನು ಕಳೆದುಕೊಂಡಿದೆ ಎಂದರೆ, ಮನುಷ್ಯರೇ ತಮ್ಮ ಶಕ್ತಿಯನ್ನು ಕಳೆದುಕೊಂಡಿದ್ದಾರೆ ಎಂದು ಅರ್ಥ. ಆ ಅಮಾನವೀಯ (ಅಮಾನವೀಯ ಎನ್ನುವ ಪದ ಆ ಘಟನೆಯ ಕ್ರೌರ್ಯಕ್ಕೆ ತೀರಾ ಸಣ್ಣದು ಅಥವಾ ಅದರ ಮೃಗೀಯತೆಯನ್ನು ಹಿಡಿಯಲು ಅದಕ್ಕೆ ಸಾಧ್ಯವಾಗುತ್ತಿಲ್ಲ.) ಘಟನೆಯಲ್ಲಿ ಪಾಲ್ಗೊಂಡವರ ಜೊತೆ ಅವರ ಕುಟುಂಬದ ಸದಸ್ಯರು ಬದುಕುವುದು ಹೇಗೆ ಸಾಧ್ಯ? ಎನ್ನುವ ಪ್ರಶ್ನೆ ಮತ್ತೆ ಮತ್ತೆ ಮನಸ್ಸಿನಲ್ಲಿ ಹಾದು ಹೋಗುತ್ತದೆ. ಜೀವಕಾರುಣ್ಯವೇ ಎಲ್ಲದರ ಮೂಲ ಎನ್ನುತ್ತೇವೆ. ಆದರೆ, ಅದನ್ನು 'ಜೀವ' ಎಂದು ಒಪ್ಪಿದರೆ ಮಾತ್ರ, ನಡೆಸಿಕೊಂಡರೆ ಮಾತ್ರ ಕಾರುಣ್ಯದ ಪ್ರಶ್ನೆ ಬಂದೀತು. ಅದನ್ನೊಂದು ಜೀವವೆಂದೇ ಒಪ್ಪದೆ, ತನ್ನ ಉಪಭೋಗಕ್ಕಾಗಿರುವ ವಸ್ತು ಮಾತ್ರ ಎಂದು ನೋಡಿದಾಗ ಜೀವವೂ ಇಲ್ಲ, ಕಾರುಣ್ಯವೂ ಇಲ್ಲ.

ಸಾಮಾನ್ಯವಾಗಿ ನಾವು ಹೆಣ್ಣಿನ ಮೇಲೆ ಹಿಂಸೆಗಳ ಬಗೆಗೆ ಮಾತನಾಡುವಾಗ ಕಾಣುವ ಹಿಂಸೆಗಿಂತ ಕಾಣದ ಹಿಂಸೆ ಇನ್ನೂ ಭೀಕರವಾದದ್ದು ಎಂದು ತಿಳಿಯುತ್ತೇವೆ. ಆದರೆ, ಕೆಲವು ದೈಹಿಕ, ಮೂರ್ತ ಹಿಂಸೆಗಳು ಅದೆಷ್ಟು ಭೀಭತ್ಸವೆಂದರೆ ಯಾವ ಜೀವಿಯು ಇನ್ನೊಂದು ಜೀವಿಯ ಮೇಲೆ ಮಾಡಬಾರದ ಆಕ್ರಮಣ ಅಲ್ಲವೇ ಇದು ಎಂದು ಒದ್ದಾಡುವಂತಾಗುತ್ತದೆ. ಇದನ್ನು ಹೇಳುತ್ತಿರುವಾಗಲೇ ನಮ್ಮೆಲ್ಲರ ಮನಸ್ಸಿಗೂ ಗೊತ್ತಿರುವ ಸತ್ಯವೆಂದರೆ, ಬೆಳಕಿಗೆ ಬಂದ ಪ್ರಕರಣ ಒಂದೋ, ಹಲವೋ ಆದರೆ, ಬೆಳಕಿಗೇ ಬಾರದೆ ಹೆಣ್ಣೆನ್ನುವ ಸೃಷ್ಟಿಸುವ ಮತ್ತು ಪೊರೆಯುವ ಜೀವಿಯನ್ನು ಅದೆಷ್ಟೆಷ್ಟು ಬಗೆಗಳಲ್ಲಿ ನಿಶ್ಶೇಷ ಮಾಡುವ ಪ್ರಕರಣಗಳು ಸಾವಿರಾರು.

ಹಾಗಿದ್ದರೆ, ನಾಗರೀಕತೆ, ಅಭಿವೃದ್ಧಿ, ಪ್ರಗತಿ, ಬೆಳವಣಿಗೆ ಎನ್ನುವುದಕ್ಕೆಲ್ಲ ಏನು ಅರ್ಥ ಉಳಿದೀತು? ಈ ಸಂಪಾದಕೀಯವನ್ನು ಬರೆಯುತ್ತಿರುವ ಹೊತ್ತಿನಲ್ಲಿ ದೇಶದಾದ್ಯಂತ ನವರಾತ್ರಿಯನ್ನು ಆಚರಿಸಲಾಗುತ್ತಿದೆ. ಹೆಣ್ಣನ್ನು ದುರ್ಗೆ ಎಂದು, ಶಕ್ತಿಯ ಅಪರಾವತಾರ ಎಂದು, ಭಯ-ಭಕ್ತಿಗಳಿಂದ ಪೂಜಿಸಲಾಗುತ್ತಿದೆ. ದುರ್ಗೆ ಒಲಿದರೆ ಬದುಕಿನ ಸಂಕಷ್ಟಗಳೆಲ್ಲ ನಿವಾರಣೆಯಾಗುತ್ತವೆ ಎನ್ನುವ ನಂಬಿಕೆಯಲ್ಲಿ ಇವುಗಳನ್ನೆಲ್ಲ ಮಾಡಲಾಗುತ್ತಿದೆ. ದುರ್ಗೆಯನ್ನು ಧೈರ್ಯ, ಆತ್ಮವಿಶ್ವಾಸ ಮತ್ತು ಸೌಂದರ್ಯದ ಸಾಕ್ಷಾತ್ಕಾರ ಎನ್ನುವುದೇ ಭಾರತೀಯರ ಮೂಲನಂಬಿಕೆ. ಕಾಣದ ದೇವಿಯನ್ನು ಭಯ-ಭಕ್ತಿಯಿಂದ ಪೂಜಿಸಲಾಗುತ್ತದೆ. ಜೀವಂತ ದೇವಿಯನ್ನು ಕಟ್ಟಿಗೆಯನ್ನು ಉರಿಸುವುದಕ್ಕಿಂತ ಸುಲಭವಾಗಿ ಉರಿಸಿ, ಸುಡಲಾಗುತ್ತಿದೆ. ಈ ವಿಪರ್ಯಾಸ ಎಂದಾದರೂ ಕೊನೆಯಾದೀತೆ? ನಿರಾಶವಾದಿಗಳಿಗೆ ಬದುಕು ಏನನ್ನೂ ಕೊಡಲಾರದು. ಆದರೆ, ಆಶಾವಾದಕ್ಕೆ ಸಣ್ಣ ಆಧಾರವಾದರೂ ಇರಬೇಕಲ್ಲ. ಈ ಹಿನ್ನೆಲೆಯಲ್ಲಿ ವಚನಕಾರ್ತಿಯರ ನಡೆ-ನುಡಿಗಳು ಸಹಜವಾಗಿಯೇ ಕಣ್ಣೆದುರಿಗೆ ಬರುತ್ತವೆ. ಇಂಥದ್ದನ್ನೆಲ್ಲಾ ಅವರೂ ಹಾದಿರಲೇಬೇಕು. ನೂರು ಸವಾಲುಗಳ ಹಾದಿಯನ್ನು ಅವರು ಅದೆಷ್ಟು ದಿಟ್ಟತನದಲ್ಲಿ ಎದುರಿಸಿದರು? ಹೆಣ್ಣಿನ ಮನೋದೈಹಿಕ ಸವಾಲುಗಳನ್ನು ಎದುರಿಸಿದ ಅವರ ಕ್ರಮ ಅವಿರೋಧಿ ಏನೂ ಆಗಿರಲಿಲ್ಲ. ವಿರೋಧಗಳನ್ನು ಅವರು ಎದುರಿಸಿರಲೇಬೇಕು. ಆದರೆ ಆ ಎಲ್ಲ ಹೊತ್ತಿನಲ್ಲಿಯೂ ಅವರು 'ಹಂದೆಯಲ್ಲ ನಾನು, ಹರುಷದ ಧೈರ್ಯವುಳ್ಳ ಹೆಣ್ಣು' ಎನ್ನುವ ಧೀರತೆಯಲ್ಲಿ ಇದನ್ನು ಎದುರಾಗಿದ್ದರಿಂದಲೇ ಅವರು ಹೆಣ್ಣಿನ ವ್ಯಕ್ತಿತ್ವ, ಬದುಕು ಎಲ್ಲದಕ್ಕೂ ಘನತೆಯ ಸ್ಥಾನವೊಂದನ್ನು ತಂದುಕೊಡಲು ಸಾಧ್ಯವಾಯಿತು. ಹೆಣ್ಣಿನ ದೇಹ ಮತ್ತು ಬದುಕಿನ ಘನತೆಯನ್ನು ಈ ವಚನಕಾರ್ತಿಯರು ತಾವೂ ಗೌರವಿಸಿದರು, ಲೋಕವೂ ಅದನ್ನು ಗೌರವಿಸಲೇಬೇಕಾದ ಹಕ್ಕೊತ್ತಾಯವನ್ನೂ ಮಂಡಿಸಿದರು.

ಈ ನವೆಂಬರ್ ತಿಂಗಳು ನಮ್ಮ ನುಡಿ ಹಬ್ಬದ ತಿಂಗಳು. ಇಡೀ ಜಗತ್ತಿನಲ್ಲಿ ಎರಡು ಸಹಸ್ರಮಾನಗಳನ್ನು ದಾಟಿ ಮೂರನೆಯ ಸಹಸ್ರಮಾನಕ್ಕೆ ಕಾಲಿಟ್ಟಿರುವ ಕೆಲವೇ ಕೆಲವು ಭಾಷೆಗಳಲ್ಲಿ ಕನ್ನಡವೂ ಒಂದು. ಕೇವಲ ಭಾಷೆಯ ಪ್ರಾಚೀನತೆಯ ಕಾರಣಕ್ಕಲ್ಲ, ಸಾಹಿತ್ಯ ಮತ್ತು ಸಂಸ್ಕೃತಿಯ ಸಮೃದ್ಧತೆಗೂ ಇದು ಅಪೂರ್ವವಾದ ಉದಾಹರಣೆಯಾಗಿದೆ. ಎಂಟು ಜ್ಞಾನಪೀಠ ಪ್ರಶಸ್ತಿಗಳು ಸಂಖ್ಯೆಯಲ್ಲಿ ಮಾತ್ರವಲ್ಲ, ಗುಣದಲ್ಲಿಯೂ ನಮ್ಮ ಹೆಮ್ಮೆಯನ್ನು ಹೆಚ್ಚಿಸುವಂತವು. ಕನ್ನಡ ಸಾಹಿತ್ಯದಲ್ಲಿ ನಡೆಯುತ್ತಿರುವ ಪ್ರಯೋಗಗಳು ಭಾರತದ ಇತರ ಭಾಷೆಗಳಲ್ಲಿ ನಡೆಯುತ್ತಿಲ್ಲ ಎನ್ನುವುದು ನಮಗೆ ಸಕಾರಣವಾದ ಹೆಮ್ಮೆಯ ಸಂಗತಿ.

ಈ ಸಂಚಿಕೆಯಲ್ಲಿ ಕನ್ನಡದ ಹಲವು ಲೇಖಕರು ಶರಣ ಚಳವಳಿ ಮತ್ತು ಪರಂಪರೆಯ ಬಗ್ಗೆ ಲೇಖನಗಳನ್ನು ನೀಡಿದ್ದಾರೆ. ಶ್ರೀ ಗೊ.ರು. ಚನ್ನಬಸಪ್ಪ, ಡಾ. ಬಿ. ನಂಜುಂಡಸ್ವಾಮಿ, ಬಿದರಹಳ್ಳಿ ನರಸಿಂಹಮೂರ್ತಿ, ಪ್ರೊ. ಓ.ಎಲ್. ನಾಗಭೂಷಣಸ್ವಾಮಿ, ಪ್ರೊ. ಅಮರೇಶ ನುಗಡೋಣಿ, ಶಿವಕುಮಾರ ಎಸ್. ಬಳಿಗಾರ, ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ, ಅವರು ತಮ್ಮ ವಿಚಾರಗಳನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ಇವರೆಲ್ಲರಿಗೆ ಹಾಗೂ ಎಂದಿನಂತೆ ಪೂರ್ಣ ಸಹಕಾರವನ್ನು ನೀಡಿರುವ ಕಾರ್ಯಾಲಯದ ಸಿಬ್ಬಂದಿಯವರಿಗೆ ಮತ್ತು ಮುಖಪುಟವು ಕಲಾವಿದ ಶ್ರೀ ಮುರಳೀಧರ ವಿ. ರಾಠೋಡ ಅವರ ಸೃಜನಶೀಲತೆಯ ಪ್ರತೀಕವಾಗಿದೆ. ನೀಲಿ ಮತ್ತು ಬಿಳಿ ಬಣ್ಣದ ಅಪೂರ್ವ ಸುಂದರವಾದ ಬಣ್ಣಗಳ ವೈದೃಶ್ಯವು ಜೀವನದ ವೈದೃಶ್ಯವನ್ನೂ ಹಾಗೆಯೇ ಎಲೆಗಳು ಬದುಕಿನ ಸಮೃದ್ಧತೆಯನ್ನೂ ಹೇಳುತ್ತಿವೆ. ಅವರಿಗೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

ಡಾ. ಎಂ.ಎಸ್. ಆಶಾದೇವಿ
ಸಂಪಾದಕರು

# ಅಧ್ಯಕ್ಷರ ನುಡಿ

ವಚನ ಸಾಹಿತ್ಯದ ಭಾಷೆ ಕನ್ನಡ. ಕನ್ನಡ ಭಾಷೆ ಅತ್ಯಂತ ಪ್ರಾಚೀನವಾದ ಭಾಷೆ ಎಂಬುದು ಎಲ್ಲರಿಗೂ ತಿಳಿದ ಭಾಷೆಯಾಗಿದೆ. ನಮಗೆ ಲಭ್ಯವಾಗಿರುವ ಅತ್ಯಂತ ಪ್ರಾಚೀನ ಶಿಲಾಶಾಸನವೆಂದರೆ ಹಲ್ಮಿಡಿ ಶಾಸನ. ಅತ್ಯಂತ ಪ್ರಾಚೀನ ಗ್ರಂಥವೆಂದರೆ ರಾಷ್ಟ್ರಕೂಟರ ನೃಪತುಂಗ ಅರಸನ ಆಸ್ಥಾನದ ಶ್ರೀ ವಿಜಯ ವಿರಚಿತ ಕವಿರಾಜಮಾರ್ಗ.

'ಕನ್ನಡ ಭಾಷೆ ಅತ್ಯಂತ ಸರಳ ಭಾಷೆ' ಅಂತೆಯೇ ವಚನಕಾರರು ತಮ್ಮ ತತ್ವ-ಸಂದೇಶಗಳನ್ನು ಜನರ ಮನೆ-ಮನಕ್ಕೆ ಮುಟ್ಟಿಸಲು 'ಕನ್ನಡವೇ' ಸೂಕ್ತ ಎಂದು ಆರಿಸಿಕೊಂಡರು.

ಕನ್ನಡ ಕನ್ನಡಿಗರ ಭಾಷೆ, ಕರ್ನಾಟಕದ ಭಾಷೆ. ಸ್ವಾತಂತ್ರ್ಯಪೂರ್ವದಲ್ಲಿ ಕರ್ನಾಟಕವು ಹರಿದು ಹಂಚಿಹೋಗಿತ್ತು, ಬಳ್ಳಾರಿ, ಮಂಗಳೂರುಗಳು ಮದ್ರಾಸ ಪ್ರಾಂತ; ವಿಜಯಪುರ, ಬಾಗಲಕೋಟೆ, ಧಾರವಾಡ, ಬೆಳಗಾವಿ ಇವೆಲ್ಲವುಗಳು ಮುಂಬೈ ಪ್ರಾಂತ; ಕಲಬುರಗಿ, ಬೀದರ, ರಾಯಚೂರು, ಕೊಪ್ಪಳ, ಯಾದಗಿರಿಗಳು ಹೈದ್ರಾಬಾದ ನಿಜಾಮ ಪ್ರಾಂತದಲ್ಲಿದ್ದರೆ, ಕೊಡಗು ಸ್ವತಂತ್ರ ರಾಜ್ಯವಾಗಿತ್ತಲ್ಲದೇ ಹಳೆಯ ಮೈಸೂರು ಭಾಗ ಮೈಸೂರು ಅರಸರ ಆಡಳಿತಕ್ಕೆ ಒಳಪಟ್ಟಿತ್ತು. ಭಾಷಾವಾರು ಪ್ರಾಂತ ರಚನೆ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿಯೇ ಕಾಂಗ್ರೆಸ್ ಒಪ್ಪಿಕೊಂಡಿತ್ತಾದರೂ, ಭಾಷಾವಾರು ರಾಜ್ಯಗಳು ರಚನೆಯಾದದ್ದು ಮಾತ್ರ ೧೯೫೬ ನವೆಂಬರ್ ಒಂದರಂದು.

ಒಂದೇ ಭಾಷೆಯನ್ನಾಡುವ ಬಹುಸಂಖ್ಯಾತ ಜನರು ಒಂದೆಡೆಯಿದ್ದರೆ, ಪ್ರಗತಿಗೆ, ಆಡಳಿತಕ್ಕೆ, ಜನರಿಗೆ ಅನುಕೂಲವಾಗುತ್ತದೆಂಬುದು ಭಾಷಾವಾರು ಪ್ರಾಂತ ರಚನೆಯ ಹಿಂದಿರುವ ಉದ್ದೇಶ. ೬೪ ವರ್ಷಗಳಾಗಿದ್ದರೂ ಈಡೇರಿದೆಯೇ ಎಂಬುದು ಇಂದು ನಮ್ಮ ಮುಂದಿರುವ ಪ್ರಶ್ನೆ.

ಆಡಳಿತದಲ್ಲಿ ಕನ್ನಡ ಹೆಚ್ಚು ಹೆಚ್ಚು ಬಳಕೆಯಾಗುತ್ತಿದೆ ಎಂಬುದು ಸಮಾಧಾನದ ಸಂಗತಿಯಾದರೆ, ಇನ್ನೂ ಸಂಪೂರ್ಣವಾಗಿ ಆಡಳಿತ ಕನ್ನಡದಲ್ಲಿ ನಡೆಯುತ್ತಿಲ್ಲ ಎಂಬುದು ನೋವಿನ ಸಂಗತಿ. ಶಿಕ್ಷಣದ ಮಾಧ್ಯಮ ಕನ್ನಡ ಭಾಷೆಯಾಗಬೇಕೆಂಬುದು ಕರ್ನಾಟಕ ರಾಜ್ಯ ರಚನೆಯ ಹಿಂದಿರುವ ಮಹತ್ವದ ಉದ್ದೇಶಗಳಲ್ಲೊಂದು. ಮನಃಶಾಸ್ತ್ರಜ್ಞರು ಕೂಡ ಪ್ರಾಥಮಿಕ ಶಿಕ್ಷಣ ಮಗುವಿನ ಮಾತೃಭಾಷೆಯಲ್ಲಿಯೇ ಆಗಬೇಕೆಂದು ಹೇಳಿದರು ಕೂಡ ಕರ್ನಾಟಕ ಸರ್ಕಾರ ಅದಕ್ಕೆ ಕಿವಿಗೊಡುತ್ತಿಲ್ಲ. ಇನ್ನೂ ವಿಪರ್ಯಾಸವೆಂದರೆ ಸರ್ಕಾರವೇ ಇಂಗ್ಲೀಷ್ ಮಾಧ್ಯಮ ಶಾಲೆಗಳನ್ನು ತೆರೆಯುತ್ತಿದೆ. ಪಾಲಕರು ಕೂಡ ತಮ್ಮ ಮಕ್ಕಳು ಇಂಗ್ಲೀಷ್ ಮಾಧ್ಯಮ ಶಾಲೆಯಲ್ಲಿ ಓದಿದರೆ ಮಾತ್ರ ಉದ್ಧಾರವಾಗುತ್ತಾರೆ ಎಂಬುದು ಅವರ ತಿಳುವಳಿಕೆ ಆಗಿದೆ. ಆದರೆ ಈ ಮುಂಚೆ ಹತ್ತನೆಯ ತರಗತಿಯವರೆಗೆ ಶಿಕ್ಷಣ ಮಾಧ್ಯಮ ಕನ್ನಡವೇ ಆಗಿತ್ತು. ನಂತರ ಕಾಲೇಜು ಶಿಕ್ಷಣ ಇಂಗ್ಲೀಷ್ ಮಾಧ್ಯಮದಲ್ಲಿತ್ತು. ಇದರಿಂದ ಐ.ಎ.ಎಸ್., ಐ.ಪಿ.ಎಸ್. ಪರೀಕ್ಷೆ ಪಾಸಾಗಲು, ವಿಜ್ಞಾನಿಗಳಾಗಲು, ಹೊರದೇಶಗಳಿಗೆ ಶಿಕ್ಷಣ, ವೃತ್ತಿಗಾಗಿ ಹೋಗಲು ಯಾವುದೇ ತೊಂದರೆ ಆಗಲಿಲ್ಲ. ಈಗೇಕೆ ಈ ತೊಂದರೆಯಾಗುತ್ತದೆ. ಇದರ ಮೇಲೆ ಬರೆಎಳೆದಂತೆ ದಕ್ಷಿಣದ ಭಾಷೆಗಳ ಮೇಲೆ ಹಿಂದಿ ಹೇರಲು ಕೇಂದ್ರ ಸರ್ಕಾರ ಪ್ರಯತ್ನಿಸುತ್ತಿದೆ. ಕೇಂದ್ರ ಸರ್ಕಾರ ಹೊಸ ಶಿಕ್ಷಣ ನೀತಿಯಲ್ಲಿ ಪ್ರಾಥಮಿಕ ಶಿಕ್ಷಣ ಮಾತೃಭಾಷೆಯಲ್ಲಿ ಅಥವಾ ಆಯಾ ರಾಜ್ಯಗಳ ರಾಜ್ಯಭಾಷೆಯಲ್ಲಿ ನೀಡಲು ಸ್ಪಷ್ಟವಾಗಿ ನಿರೂಪಿಸಬೇಕು.

ಕನ್ನಡ ಸಾಹಿತ್ಯದ ಹೃದಯವೆಂದರೆ ವಚನ ಸಾಹಿತ್ಯ ಎಂದರೆ ತಪ್ಪಾಗಲಾರದು. ಇದಕ್ಕೆ ಪ್ರಮುಖ ಕಾರಣವೆಂದರೆ ಅದು ಜನರ ಭಾಷೆ ಕನ್ನಡದಲ್ಲಿ ರಚನೆಯಾದದ್ದು. 'ವಚನ' ಪ್ರಕಾರ ಕನ್ನಡ ಭಾಷೆಯಲ್ಲಿಯೇ ಅತ್ಯಂತ ವಿಶಿಷ್ಟ ಪ್ರಕಾರವಾಗಿದೆ. ಇದು ಪದ್ಯದ ಲಯವನ್ನು, ಗದ್ಯದ ಸ್ಪಷ್ಟತೆಯನ್ನು ಪಡೆದ ಅನುಭಾವ ಸಾಹಿತ್ಯವಾಗಿದೆ. ಜನರು ಬದುಕನ್ನು ಕಟ್ಟಿಕೊಳ್ಳಲು ಉಪಯುಕ್ತವಾದ ಸಾಹಿತ್ಯವಾಗಿದೆ. ಕನ್ನಡ ಮಾಧ್ಯಮದಲ್ಲಿ ಶಿಕ್ಷಣವನ್ನು ಕೊಡದೆ ಹೋದರೆ ಮಕ್ಕಳಿಗೆ ವಚನಸಾಹಿತ್ಯ, ದಾಸಸಾಹಿತ್ಯ, ಸರ್ವಜ್ಞನ ತ್ರಿಪದಿಗಳು ಮುಂತಾದವುಗಳ ಪರಿಚಯವಾಗದೆ ಹೋಗಬಹುದು. ಬದುಕಿಗೆ ಅವಶ್ಯಕ ಜ್ಞಾನದಿಂದ ವಂಚಿತರಾಗುತ್ತಾರೆ.

ಸಿರಿಗನ್ನಡಂ ಗೆಲ್ಗೆ, ಬಾಳ್ಗೆ.

**– ಅಪ್ಪಾರಾವ ಅಕ್ಕೋಣೆ**



## ಕಾಯಕ – ದಾಸೋಹ

**ಶ್ರೀ ಗೊ.ರು. ಚನ್ನಬಸಪ್ಪ**

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ಶರಣ ಚಳುವಳಿಯಲ್ಲಿ 'ಧರ್ಮ' ಎನ್ನುವುದು ಶಾಸ್ತ್ರಾಚರಣೆಯಾಗಿರಲಿಲ್ಲ; ಕಾರ್ಯಾಚರಣೆಯಾಗಿತ್ತು. ಶರಣರ ಮುಖ್ಯ ಲಕ್ಷ್ಯವೆಲ್ಲ ಇದ್ದದ್ದು ವ್ಯಷ್ಟಿ ಮತ್ತು ಸಮಷ್ಟಿ ಬದುಕಿನ ಸುಧಾರಣೆ. ಎಂತಲೇ ಅವರು ಶ್ರಮದ ದುಡಿಮೆ ಮತ್ತು ಸಮಾನ ಹಂಚಿಕೆಗಳ ಆರ್ಥಿಕ ನೀತಿಗೆ ಆದ್ಯತೆ ನೀಡಿದರು. ಆಶ್ರಮದ ದುಡಿಮೆಯನ್ನೇ 'ಕಾಯಕ' ಎಂದರು. ಸಮಾನ ಹಂಚಿಕೆಯನ್ನೇ 'ದಾಸೋಹ' ಎಂದರು. ಅವುಗಳ ಅನುಷ್ಠಾನವೇ 'ಧರ್ಮ' ಎಂದು ಸಾರಿದರು.

ಶರಣರ ಪರಿಕಲ್ಪನೆಯಲ್ಲಿ 'ಕಾಯಕ' ಎನ್ನುವುದು ಕೇವಲ ಯಾಂತ್ರಿಕ ದುಡಿಮೆಯಲ್ಲ; ಹೊಟ್ಟೆಪಾಡಿಗಾಗಿಯೇ ನಡೆಸುವ ಕಸಬಲ್ಲ ಅಥವಾ ಮೇಲ್ವರ್ಗದವರಿಗಾಗಿ ಮಾಡುವ ಜೀತವೂ ಅಲ್ಲ. ಹಾಗೆಯೇ 'ದಾಸೋಹ' ಎನ್ನುವುದು ಕೇವಲ ಉಳ್ಳವರು ಹೆಸರಿಗಾಗಿ ನಡೆಸುವ ಸಮಾರಾಧನೆಯಲ್ಲ; ಸಲ್ಲದ್ದನ್ನು ಹಂಚುವ ಸೇವೆಯಲ್ಲ. ಕಾಯಕ-ದಾಸೋಹಗಳಲ್ಲಿ ಒಂದು ಪಾವಿತ್ರ್ಯತೆ ಇದೆ. ಅದು ಅಂತರ್ಗತ. ವಾಸ್ತವವಾಗಿ ಇವೆರಡರ ಸಮನ್ವಯ ಮತ್ತು ಅವುಗಳ ಜೊತೆಗೂಡಿದ 'ಅನುಭಾವ' ಚಿಂತನೆಯೇ ಶರಣರ ಜೀವನ ಯೋಗವಾಗಿತ್ತು!

ಶರಣ ಸಂಕುಲದ ಸಂಬಂಧ ಸೂತ್ರದ ಮೂಲವೇ ಕಾಯಕವಾಗಿತ್ತು. ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಒಂದಲ್ಲ ಒಂದು ಕಾಯಕವನ್ನು ಮಾಡಲೇಬೇಕಾಗಿತ್ತು. ಆ ಕಾಯಕ ವ್ಯಕ್ತಿಯ ಒಲವಿಗೆ ತಕ್ಕಂತೆ ಬೌದ್ಧಿಕವಿರಬಹುದು ಅಥವಾ ದೈಹಿಕವಿರಬಹುದು ಯಾವುದಿದ್ದರೂ ಅದು ಶ್ರಮಪೂರ್ಣವಿರಬೇಕು. ಇಲ್ಲದಿದ್ದರೆ ಶರಣರ ದೃಷ್ಟಿಯಲ್ಲಿ ಅದು ಅನ್ಯಾಯವೆನಿಸುತ್ತದೆ; ಅಧರ್ಮವೆನಿಸುತ್ತದೆ. ಅಕ್ರಮವಾಗಿ ಗಳಿಸುವವರು ಶ್ರಮಜೀವಿಗಳಲ್ಲ; ಕ್ರೂರಶೋಷಕರು; ಸಮಾಜದ ಪರೋಪಜೀವಿಗಳು.

ಅಂತಹ ಶೋಷಣೆ ಮತ್ತು ಪರೋಪ ಜೀವನದ ಅಧಿಕೃತ ವ್ಯವಸ್ಥೆಯನ್ನು ಬದಲಾಯಿಸಲೆಂದೇ ಬಸವಾದಿ ಶರಣರು ಕಾಯಕಕ್ಕೆ ಮಹತ್ವಕೊಟ್ಟರು; ಕಾಯಕದ ಜೀವಿಗೆ ಗೌರವಕೊಟ್ಟರು. ವ್ಯಕ್ತಿ ಸ್ವಾಭಿಮಾನಿಯಾಗಿ, ಸ್ವಾವಲಂಬಿಯಾಗಿ, ಸಮಾಜಕ್ಕೆ ಸಲ್ಲುವಂತಾಗ ಬೇಕೆಂಬುದೇ ಕಾಯಕ ಸೂತ್ರದ ಆಶಯವಾಗಿತ್ತು. ಅದಕ್ಕಾಗಿ ಬಸವಣ್ಣನವರು ಶೋಷಣಾ ರಹಿತವಾದ ಮತ್ತು ವರ್ಣ-ವರ್ಗರಹಿತವಾದ ಸಾಮಾಜಿಕ ವ್ಯವಸ್ಥೆಯೊಂದರ ನೀಲಿನಕ್ಷೆಯನ್ನು ತಯಾರಿಸಿದರು. ಆ ಸಂದರ್ಭದಲ್ಲಿದ್ದ ಸ್ಥಿತಿ-ಗತಿಗಳು ಮತ್ತು ನಂತರ ಕಂಡುಬಂದ ಪರಿವರ್ತನೆಗಳನ್ನು ಗಮನಿಸಿದರೆ, ಅವರದ್ದು ಸಾರ್ವಕಾಲಿಕ ಅನ್ವಯದ ಕ್ರಮವಾಗಿತ್ತೆಂಬುದು ಅರಿವಾಗುತ್ತದೆ.

ಶರಣರ ಕಾಯಕ ಸಿದ್ಧಾಂತದ ವಿಶೇಷವೆಂದರೆ, ಅದಕ್ಕೆ ದೊರೆತ ಘನತೆ ಮತ್ತು

ಸಮಾನತೆ. ಕಾಯಕ ಯಾವುದೇ ಇದ್ದರೂ ಅಲ್ಲಿ ಮೇಲಿಲ್ಲ; ಕೀಳಿಲ್ಲ. ಆದ್ದರಿಂದಲೇ ವಿವಿಧ ಸಮುದಾಯಗಳ ವಿವಿಧ ವೃತ್ತಿಗಳ ಜನರೆಲ್ಲ ಕಲ್ಯಾಣದಲ್ಲಿ ಸಮಾವೇಶಗೊಂಡು, ಒಂದೇ ಸಮುದಾಯವಾಗಿ, 'ಕಾಯಕ ಸಮಾಜ'ವಾಗಿ ಬಾಳಲು ಸಾಧ್ಯವಾಯಿತು.

ಕಲ್ಯಾಣವು ಒಂದು ರೀತಿಯಲ್ಲಿ 'ಕಾಯಕ ವಿಶ್ವವಿದ್ಯಾಲಯ'ವಾಗಿತ್ತೆಂದು ಹೇಳಬಹುದು. ಆ ವಿಶ್ವವಿದ್ಯಾಲಯದಲ್ಲಿ 'ಕಾಯಕ' ಪದವಿಯಾಗಿದ್ದರೆ, 'ದಾಸೋಹ' ಸ್ನಾತಕೋತ್ತರ ಪದವಿಯಾಗಿತ್ತು! ಆ ವಿಶ್ವವಿದ್ಯಾಲಯಕ್ಕೆ ಪ್ರವೇಶಿಸಿದ ಅನೇಕರು ಪದವೀಧರರಾದರು, ಸ್ನಾತಕೋತ್ತರ ಪದವೀಧರರೂ ಆದರು. ಇಂದಿನ ಪದವೀಧರರ ಹೆಸರುಗಳ ಮುಂದೆ ಅವರ ಪಡೆದ ಪದವಿಗಳ ಸಂಕೇತಾಕ್ಷರಗಳಿದ್ದಂತೆ ಶರಣರ ಹೆಸರುಗಳ ಮೊದಲೇ ಅವರ ಕಾಯಕ ಪದವಿಗಳು ಸಂಕೇತಾಕ್ಷರಗಳಾಗಿವೆ ಎಂಬುದನ್ನು ಅವರ ಹೆಸರುಗಳಿಂದಲೇ ತಿಳಿಯಬಹುದು.

ಉದಾಹರಣೆಗೆ ಜೇಡರದಾಸಿಮಯ್ಯ, ನುಲಿಯ ಚಂದಯ್ಯ, ಅಂಬಿಗ ಚೌಡಯ್ಯ, ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ, ಒಕ್ಕಲಿಗ ಮುದ್ದಣ್ಣ, ವಚನ ಭಂಡಾರಿ ಶಾಂತಯ್ಯ, ತುರುಗಾಹಿ ರಾಮಣ್ಣ, ವೈದ್ಯ ಸಂಗಣ್ಣ, ಗಾಣದ ಕನ್ನಯ್ಯ, ತಳವಾರ ರಾಮದೇವ, ಡೋಹರಕಕ್ಕಯ್ಯ, ಸೂಜಿರೆಮ್ಮವ್ವೆ, ಹೊಲಿಗೆಯ ಏಲೇರಿ ಎಮ್ಮವ್ವೆ, ತೊಂಗಿನ ಮಹಾದೇವಿ, ಮೋಳಿಗೆ ಮಾರಯ್ಯ, ಸಮಗಾರ ಹರಳಯ್ಯ ಇತ್ಯಾದಿ.

ಹೀಗೆ ಮುನ್ನೂರಕ್ಕೂ ಹೆಚ್ಚು ಶರಣರು ಮೂವತ್ತಕ್ಕೂ ಹೆಚ್ಚು ಶರಣೆಯರು ಕಾಯಕದ ಕಲಿಗಳಾಗಿದ್ದರು. ಅವರೆಲ್ಲ ಕುಲ, ಜಾತಿ, ಮತ, ಪಂಥ, ವರ್ಣ, ವರ್ಗ, ಲಿಂಗ, ಮೇಲು-ಕೀಳುಗಳ ಬಂಧನಗಳನ್ನು ಮೀರಿ ಪರಸ್ಪರ ಗೌರವದಿಂದ, ಪರಸ್ಪರ ಶರಣರೆಂದು ಬದುಕಿದ್ದರು.

ಶರಣರಿಗೆ ಇಷ್ಟಲಿಂಗ ಪೂಜೆ ಬಂದು ಕಟ್ಟುಪಾಡಾಗಿದ್ದರೂ, ಅಷ್ಟೇ ನಿಷ್ಠೆಯಿಂದ ಸತ್ಯಶುದ್ಧ ಕಾಯಕವನ್ನು ಮಾಡಲೇಬೇಕಾಗಿತ್ತು. ಆ ನಿಷ್ಠೆ ಎಷ್ಟೆಂದರೆ, 'ಕಾಯಕದಲ್ಲಿ ನಿರತನಾದಡೆ ಲಿಂಗಪೂಜೆಯಾದರೂ ಮರೆಯಬೇಕು' ಎನ್ನುವಷ್ಟು! ಯಾವುದೇ ಕಾಯಕ ವ್ಯಕ್ತಿಯ ಮೇಲೆ ಹೇರಿದ ಒತ್ತಾಯವಾಗದೆ, ವ್ಯಕ್ತಿ ತನ್ನ ಸ್ವಯಂ ಇಚ್ಛೆಯಿಂದ ಒಪ್ಪಿಕೊಂಡ ಆಯ್ಕೆಯಾಗಿರುತ್ತಿತ್ತು. ಶರಣರ ಕಾಯಕಗಳು ಸಮಾಜದ ಬದುಕಿಗೆ ಬೇಕಾದ ಅಗತ್ಯಗಳನ್ನೆಲ್ಲ ಪೂರೈಸುತ್ತಿದ್ದವು. ಅಲ್ಲಿ ಅನ್ಯಾಶ್ರಯದ ಮಾತಿಲ್ಲ. ಪರಸ್ಪರ ವಿನಿಮಯವೇ ಸೂತ್ರವಾಗಿತ್ತು. ಅವರ ಕಾಯಕ ಬೆವರು ಹರಿಸುವ ಕೆಲಸ. ಹಾಗೆಯೇ ಅದು ಪರಶಿವನಿಗೆ ಸಲ್ಲುವ ಸೊಮ್ಮಾಗಿತ್ತು. 'ಕೊಡುವವನೂ ಕೊಳ್ಳುವವನೂ ಸಂಗನೇ' ಎಂಬ ಬಸವಣ್ಣನವರ ಮಾತು ಶರಣರ ಅರ್ಪಣಾಭಾವದ ಕಾಯಕಕ್ಕೆ ಸಾಕ್ಷಿಯಾಗಿದೆ. ಪರಿಶುದ್ಧ ಭಾವದಿಂದ ಮಾಡಿದ ಕಾಯಕದಿಂದ ಬಂದದ್ದೇ ನಿಜವಾದ ಸಂಪತ್ತು. ಅಂತಹ ಸಂಪತ್ತು ಮಾತ್ರ ಸಮಾಜ ಸ್ವಾಸ್ಥ್ಯಕ್ಕೆ ಸಲ್ಲುವಂಥದ್ದು.

ಶರಣರು ತಾವು ನುಡಿದು ಸಾರಿದ, ನಡೆದು ತೋರಿದ ಕಾಯಕದ ಮೂಲಕ ಮಾನವಘನತೆ- ಸಮಾನತೆಗಳನ್ನು ಎತ್ತಿ ಹಿಡಿದರು. ಯಾವುದೇ ಕಾಯಕವಿರಲಿ, ಅದಕ್ಕೊಂದು ದಿವ್ಯತೆಯಿತ್ತು; ಪಾವಿತ್ರ್ಯತೆ ಇತ್ತು. ಕಾಯಕದ ಮತ್ತೊಂದು ಮಹತ್ವದ ಅಂಶವೆಂದರೆ, ಮೊದಲೇ ಹೇಳಿದಂತೆ ಯಾರು ಯಾವ ಕಾಯಕವನ್ನಾದರೂ ಮಾಡಲು ಅವಕಾಶವಿದ್ದುದು. ಇದರಿಂದ ವಂಶಪರಂಪರೆಯ ವೃತ್ತಿನಿರ್ಬಂಧದ ನಿವಾರಣೆಯಾಗಿ, ವ್ಯಕ್ತಿಯ ವೃತ್ತಿಸ್ವಾತಂತ್ರ್ಯಕ್ಕೆ ಅವಕಾಶವಾಯಿತು. ಸೋಮಾರಿತನಕ್ಕೆ, ಭಿಕ್ಷಾಟನೆಗೆ ಅವಕಾಶವಿಲ್ಲದೆ ಎಲ್ಲರೂ ದುಡಿದು ಸಮಾನ ಗೌರವದಿಂದ ಬದುಕುವಂತಾಯಿತು.

ಅಷ್ಟೇ ಅಲ್ಲ, ವ್ಯಕ್ತಿ ತನ್ನ ಕಾಯಕದ ಮೂಲಕ ಹೊಸ ಅರಿವು-ಅನುಭವಗಳನ್ನು



ಪಡೆಯಲು ಅವಕಾಶವಾಯಿತು. 'ಕಾಯಕ ನಿಷ್ಠೆ ನಿನ್ನನ್ನು ಇನ್ನೊಂದರ ಅರಿವಿಗೆ ಒಯ್ಯಬೇಕು. ನಿನ್ನ ನಿಷ್ಠೆ ಮತ್ತು ಅರಿವು ಎರಡೂ ಒಂದಾಗಬೇಕು. ಆ ಎರಡೂ ಒಂದಾದಾಗ ಗುಹೇಶ್ವರನ ಕೂಟ' ಎಂದಿದ್ದಾನೆ ಅಲ್ಲಮಪ್ರಭು.

ಕಾಯಕ ಅರ್ಪಣ ಭಾವದ ಒಂದು ಶುದ್ಧಕ್ರಿಯೆ. ಕಾಯಕ ಶೀಲನಾದವನು ಮೊದಲು ತನ್ನನ್ನು ತಾನು, ತಾನು ಮಾಡುವ ಕಾರ್ಯಕ್ಕೆ ಅರ್ಪಿಸಿಕೊಳ್ಳುತ್ತಾನೆ. ಆ ಕಾಯಕದಿಂದ ಬರುವ ಫಲವನ್ನು ಸಮಾಜಕ್ಕೆ ಅರ್ಪಿಸುತ್ತಾನೆ. ಆದ್ದರಿಂದಲೇ ಶರಣರ ಕಾಯಕದ ಪರಿಕಲ್ಪನೆ ಉಳಿದ ವೃತ್ತಿಗಳಿಗಿಂತ ಭಿನ್ನವಾಗುತ್ತದೆ; ಉನ್ನತವಾಗುತ್ತದೆ.

ಈ ದೃಷ್ಟಿಯಿಂದಲೇ ಶರಣರ 'ಕಾಯಕ ಸಿದ್ಧಾಂತ' ಅತ್ಯಂತ ವೈಚಾರಿಕವಾದದ್ದು, ವೈಧಾನಿಕವಾದದ್ದು ಮತ್ತು ವ್ಯಾವಹಾರಿಕವಾದದ್ದು ಎಂಬುದನ್ನು ಆಧುನಿಕ ವಿದ್ವಾಂಸರು, ಸಮಾಜ ಶಾಸ್ತ್ರಜ್ಞರು ಮತ ಆರ್ಥಿಕ ತಜ್ಞರೆಲ್ಲ ಮುಕ್ತವಾಗಿ ಒಪ್ಪಿಕೊಂಡಿರುವುದು.

ಇನ್ನು 'ದಾಸೋಹ' ಈ ಶಬ್ದಕ್ಕೆ ಆಧ್ಯಾತ್ಮಿಕ ಅರ್ಥ ಏನೇ ಇದ್ದರೂ ಲೌಕಿಕ ಬದುಕಿಗೆ ಸಂಬಂಧಿಸಿ ಹೇಳುವುದಾದರೆ. ಉಳ್ಳವರು ಇಲ್ಲದವರಿಗೆ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ನೀಡುವುದೇ ದಾಸೋಹ. ಶರಣನಾದವನು ಕಾಯಕ ಮಾಡುವಾಗಲೇ ಈ ದಾಸೋಹ ಭಾವ ಹೊಂದಿರುತ್ತಾನೆ.

'ದಾಸೋಹ'ವು ಸಮುದಾಯದಲ್ಲಿ ಸಹಕಾರ ಮತ್ತು ಹಂಚಿ ಉಣ್ಣುವ ಭಾವನೆಯನ್ನು ಬೆಳೆಸುವ ಒಂದು ಅಮೂಲ್ಯವಾದ ಸೂತ್ರ. ವ್ಯಕ್ತಿ ತನ್ನ ನಿಷ್ಠೆಯ ಕಾಯಕದಿಂದ ಬಂದ ಗಳಿಕೆಯನ್ನು ತನ್ನ ಅಗತ್ಯಕ್ಕಷ್ಟೇ ಬಳಸಿಕೊಂಡು ಉಳಿದೆಲ್ಲವನ್ನು ತನ್ನ ಸ್ವಇಚ್ಛೆಯಿಂದ ಸಮಾಜಕ್ಕೆ ಅರ್ಪಿಸುವುದು ನಿಜವಾದ ದಾಸೋಹ. ಯಾರೇ ವ್ಯಕ್ತಿಯ ಸಂಪಾದನೆ ಕೇವಲ ತನ್ನ ಸ್ವಂತ ಹಿತಕ್ಕೆ ಮಾತ್ರ ಬಳಕೆಯಾಗಬಾರದು. ಅದು ಸಮಾಜ ಹಿತಕ್ಕೂ ಬಳಕೆಯಾಗಬೇಕು. ವ್ಯಕ್ತಿ ಸಮಾಜದ ಭಾಗವಾದುದರಿಂದ ಅವನಿಗೆ ಸ್ವಂತ ಹಿತವೆಂಬುದೇ ಇರಬಾರದು. ಸಮಾಜ ಸಂತೃಪ್ತಿಯೇ ವ್ಯಕ್ತಿಯ ಸಂತೃಪ್ತಿಯೂ ಆಗಬೇಕು.

'ದಾಸೋಹ' ಒಂದು ನಿಸ್ವಾರ್ಥ ಸೇವೆ. ಅಲ್ಲಿ ಸೇವೆ ಸಲ್ಲಿಸುವ ವ್ಯಕ್ತಿಗೆ 'ಮಾಡಿದೆನೆಂಬುದು ಮನದಲ್ಲಿ ಹೊಳೆ'ಯುವಂತಿಲ್ಲ. ಸೃಷ್ಟಿಯ ಸಮಸ್ತದಲ್ಲೂ ಭಗವಂತನ ಅಂಶವೇ ಇರುವ ಕಾರಣ, ತಾನು ಸಲ್ಲಿಸಿದುದೆಲ್ಲ ಭಗವಂತನಿಗೇ ಅರ್ಪಿತವಾಗುತ್ತದೆ ಎಂಬ ತೃಪ್ತಿ ಅವನಲ್ಲಿರುತ್ತದೆ. ದಾಸೋಹದ ಮೂಲಕ ಮಾನವ ಸೇವೆ ಸಂದರೆ, ಮಾನವ ಸೇವೆಯ ಮೂಲಕ ಮಹಾದೇವನ ಅನುಭವವಾಗುತ್ತದೆ.

ದಾಸೋಹದಲ್ಲಿ ವ್ಯಷ್ಟಿಹಿತವೂ ಇದೆ; ಸಮಷ್ಟಿಹಿತವೂ ಇದೆ. ದಾಸೋಹಿ ದಾನಿಯಲ್ಲ; ದಾಸ; ಭಗವಂತನ ಅರ್ಥಾತ್ ಸಮಾಜದ ಸೇವಕ. ಅಲ್ಲಿ 'ಅಹಂ' ಇರುವುದಿಲ್ಲ. ಎಲ್ಲವೂ ಭಗವಂತನದೇ ಎನ್ನುವ ವಿನಮ್ರತೆ ಇರುತ್ತದೆ. ಅಂತಹ ಸೇವೆಯಿಂದ ದಾಸೋಹಿ ಒಂದು ಅನಿರ್ವಚನೀಯ ದಿವ್ಯಾನಂದವನ್ನು ಅನುಭವಿಸುತ್ತಾನೆ.

ಶರಣರ ಕಾಯಕ ಯಾವುದೇ ಬಂಡವಾಳ ಹೂಡುವ ಅಥವಾ ಲಾಭಗಳಿಸುವ ಆಧುನಿಕ ಉದ್ಯಮದಂತಲ್ಲ. ಅದು ಇನ್ನೊಬ್ಬರ ಶ್ರಮವಲ್ಲ; ಸ್ವಂತ ಶ್ರಮ. ಅಲ್ಲಿ ಲಾಭ-ನಷ್ಟಗಳ ದೃಷ್ಟಿಯೇ ಇರುವುದಿಲ್ಲ. ಬಂದುದನ್ನೆಲ್ಲ ಸಂಗ್ರಹಿಸಿಟ್ಟುಕೊಳ್ಳುವ ಅವಕಾಶವಿಲ್ಲ. ಹಾಗೆ ಸಂಗ್ರಹಿಸಿಟ್ಟುಕೊಳ್ಳುವುದರಿಂದ ಆರ್ಥಿಕ ಸಮತೋಲನಕ್ಕೆ ಭಂಗವುಂಟಾಗುತ್ತದೆ. ಆದರೆ ದಾಸೋಹ ಸೂತ್ರ ಅನುಸರಿಸಿದರೆ ಸಂಗ್ರಹಕ್ಕೆ ಅವಕಾಶವೇ ಇರುವುದಿಲ್ಲ. ಅಂದಂದಿನ ಗಳಿಕೆ

ಕಾಯಕವಾದರೆ, ಅಂದಂದಿನ ಬಳಕೆಯೇ ದಾಸೋಹ.

ಹೀಗೆ ಶರಣರು ಕಾಯಕ-ದಾಸೋಹಗಳಿಗೆ ಅತ್ಯಂತ ಮಹತ್ವಕೊಟ್ಟಿದ್ದರು. ನಿಯತಕಾಲಿಕವಾಗಿ 'ಅನುಭವ ಮಂಟಪ'ದಲ್ಲಿ ಸೇರಿ ಧರ್ಮಜಿಜ್ಞಾಸೆ ಮತ್ತು ತತ್ವಚಿಂತನೆಗಳನ್ನು ನಡೆಸುತ್ತಿದ್ದರು. ಅವರು ನಡೆಸುತ್ತಿದ್ದ ಚರ್ಚೆ ಮತ್ತು ಚಿಂತನೆಗಳಿಗೆ ಅವರ ನಿತ್ಯಾನುಭವಗಳೇ ಆಧಾರವಾಗಿರುತ್ತಿದ್ದವು. ಅನುಭವ ಮಂಟಪ ನಿಜವಾದ ಅರ್ಥದಲ್ಲಿ ಕಾಯಕ ಯೋಗಿಗಳ ವಿಚಾರ ಸಂಸತ್ತಾಗಿತ್ತು.

ನಮ್ಮದು "ಸಮಾಜವಾದಿ ಜಾತ್ಯಾತೀತ ಪ್ರಜಾಪ್ರಭುತ್ವ" ಎಂದು ವೇದಿಕೆಗಳಲ್ಲಿ ಹೇಳಿಕೊಳ್ಳುವ ಇಂದಿನ ಆಡಳಿತ ನಡೆಸುವ ಜನ ಪ್ರತಿನಿಧಿಗಳು ೨೧ನೆಯ ಶತಮಾನದ ಶರಣರ 'ಕಾಯಕ-ದಾಸೋಹ' ಸಿದ್ಧಾಂತದ ಅರ್ಥ-ಆಶಯಗಳನ್ನು, ಸ್ವರೂಪ-ಪರಿಣಾಮಗಳನ್ನು ಅನುಷ್ಠಾನಗೊಳಿಸಿದರೆ ಮಾತ್ರ ನಮ್ಮ ಪ್ರಜಾಪ್ರಭುತ್ವ ಅರ್ಥಪೂರ್ಣವಾಗುತ್ತದೆ.

*೪೦೬, 'ಪ್ರಣಾಮ' ೩ನೇ ಕ್ರಾಸ್, 'ಎಫ್' ರಸ್ತೆ, ಐಡಿಯಲ್ ಹೋಮ್ ಟೌನ್‌ಶಿಪ್, ೨ನೇ ಹಂತ*
*ರಾಜರಾಜೇಶ್ವರಿ ನಗರ, ಬೆಂಗಳೂರು-೫೬೦ ೦೯೮ ಮೊ: ೯೯೮೦೫ ೧೨೩೮೯*

**ಅಲ್ಲಮನಿಗೆ..**

ಇಂದಿಗೂ ಅನಿಸುತ್ತಿದೆ ನೀನಿಲ್ಲೇ ..ಇದ್ದಂತೆ..
ಮಧುಕೇಶ್ವರನ ಗುಡಿಯ ಪ್ರಾಂಗಣದಲಿ
ನೂರು ನೀಲಾಂಜನದ ಬೆಳಕಿನಲಿ
ಶಾಸ್ತ್ರಬದ್ಧ ನೂಪುರದ ದನಿ
ಮಾಯೆಯ ಮೋಹಕ ಹೆಜ್ಜೆಯ ಲಾಸ್ಯ
ನಿನ್ನ ಮದ್ದಲೆಯ ದುಡಿ ಚಿತ್ತದಲಿ ಅಚ್ಚೊತ್ತಿವೆ!
ಮಾಯೆಯ ಒಪ್ಪದೆ ಯಾವ ಸೆಳತಕ್ಕೂ ಸಿಕ್ಕದೆ
ಎತ್ತಲೋ ಹೋದೆಯಂತಲ್ಲ ಅಲ್ಲಮ?
ಬೆನ್ನು ಹತ್ತಿದ ಮಾಯೆ
ತನ್ನಾಸೆ ಚಿತೆಯಲ್ಲೇ ಭಸ್ಮವಾದಳಂತೆ!
"ಸಾಸಿವೆಯ ಸುಖಕ್ಕೆ ಸಾಗರದಷ್ಟು
ಕಷ್ಟಕೋಟಲೆ" ಎಂಬ ನಿನ್ನ ನಿಲುವ
ಮನಸುಗಳ ಮುಟ್ಟಿತುಲೋಕ ಮೆಚ್ಚಿತು!
ಮತ್ತೆಂದೋ ಕಲ್ಯಾಣದಲಿ ಪ್ರಕಟವಾದೆಯಂತೆ!
ಗೌರೀಶಂಕರದೆತ್ತರ ಬೆಳೆದಿದ್ದೆಯಂತೆ!
ಬಸವಣ್ಣನ ಗೌರವ ನೀ ಪಡೆದೆಯಂತೆ!
ಶರಣ ಕುಲದ ಮೆಚ್ಚುಗೆ ಗಳಿಸಿದೆಯಂತೆ!
ಕಲ್ಯಾಣವೇ ಪ್ರಣತೆಯ ಜ್ಯೋತಿಯಂತೆ
ಆತ್ಮ ಕಲ್ಯಾಣದ ಆರತಿಯಂತೆ
ಕೊನೆಗೆ ಕದಳಿಗೆ ನಡೆದೆಯಂತೆ
ಇಹವ ತೊರೆದು ಮಹವಾದೆಯಂತೆ
ಬಯಲಲ್ಲಿ ಬಯಲಾದೆಯಂತೆ
ಆದರೂ... ಇಂದಿಗೂ ಅನ್ನಿಸುತ್ತಿದೆ
ನೀನಿಲ್ಲೇ ಇದ್ದಂತೆ ನಿನ್ನ ಮದ್ದಲೆ ನುಡಿದಂತೆ...!!

-ಎಸ್.ಜಿ. ಶಿವಶಂಕರ್

*೫೧೭೭, 'ಶಿವಲತ', ಎಚ್.ಟಿ.ಜೋಡಿ ರಸ್ತೆ, ವಿಜಯನಗರ ೨ನೆ ಹಂತ*
*ಮೈಸೂರು-೫೭೦೦೧೭*



## ವಚನ ಸಾಹಿತ್ಯ ರಕ್ಷಣೆ ಮಾಡಿದ ಮಹಾಶರಣೆ ಗಂಗಾಂಬಿಕೆ

ಶ್ರೀ ಎಚ್.ಎಸ್. ಸಿದ್ಧಗಂಗಪ್ಪ

ಒಬ್ಬ ಯಶಸ್ಸಿನ ಹಿಂದೆ ಒಬ್ಬ ಸ್ತ್ರೀಯಿರುತ್ತಾಳೆ ಎಂಬ ಮಾತು ಅನೇಕ ಮಹಾನ್ ಸಾಧಕರ ಜೀವನದಲ್ಲಿ ಸಾಕ್ಷಾತ್ಕಾರವಾಗಿದೆ. ಮಹಾಮಾನವತಾವಾದಿ, ಸಮಾಜೋಧಾರ್ಮಿಕ ಚಳವಳಿಯ ನೇತಾರ, ಸಮಾನತೆಯ ಹರಿಕಾರ ಜಗಜ್ಯೋತಿ ಬಸವಣ್ಣನವರ ಧರ್ಮಪತ್ನಿಯರಾದ ನೀಲಾಂಬಿಕೆ ಹಾಗೂ ಗಂಗಾಂಬಿಕೆಯವರು ಬಸವಣ್ಣನವರ ಸಾಧನೆಗೆ, ಯಶಸ್ಸಿಗೆ ಸ್ಫೂರ್ತಿಯಾಗಿ ಅವರ ಹೆಜ್ಜೆಗಳ ಹಿಂದೆ ಹೆಜ್ಜೆಯನ್ನಿಡುತ್ತಾ ಸಮಾಜಮುಖಿ ಸೇವೆಯಲ್ಲಿ ಅರ್ಪಿಸಿಕೊಂಡ ಮಹಾಸಾಧ್ವಿಯರು. ವಚನಕಾರ್ತಿಯರಾಗಿಯೂ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ. ವಚನ ಸಾಹಿತ್ಯವನ್ನು ರಕ್ಷಣೆ ಮಾಡುವಲ್ಲಿ ಗಂಗಾಂಬಿಕೆ ವಹಿಸಿದ ಪಾತ್ರ ಅಮೋಘವಾದುದು.

ಬಸವಣ್ಣನವರ ಹಿರಿಯ ಪತ್ನಿಯದ ಗಂಗಾಂಬಿಕೆಯನ್ನು ಕುರಿತು ಅನೇಕ ಪ್ರಸಿದ್ಧ ಕವಿಗಳು ತಮ್ಮ ಕಾವ್ಯಗಳಲ್ಲಿ, ಪುರಾಣಗಳಲ್ಲಿ ಆಕೆಯ ಅಸಾಧರಣಾ ವ್ಯಕ್ತಿತ್ವವನ್ನು ಅನಾವರಣ ಮಾಡಿದ್ದಾರೆ. ಹರಿಹರನ ಬಸವರಾಜದೇವರ ರಗಳೆ, ಭೀಮಕವಿಯ ಬಸವಪುರಾಣ, ಸಿಂಗಿರಾಜನ ಪುರಾಣ, ಸಿದ್ಧನಂಜೇಶನ ಗುರುರಾಜ ಚಾರಿತ್ರ, ಷಡಕ್ಷರದೇವನ ಬಸವರಾಜ ವಿಜಯ, ಶಾಂತಲಿಂಗದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ, ಮುಖಬೋಳು ಸಿದ್ಧಲಿಂಗನ ಷಟ್‌ಸ್ಥಲತಿಲಕ, ಚೆನ್ನಪ್ಪ ಕವಿಯ ಶರಣಲೀಲಾಮೃತ ಮೊದಲಾದ ಕೃತಿಗಳಲ್ಲಿ ಗಂಗಾಂಬಿಕೆಗೆ ಸಂಬಂಧಿಸಿದಂತೆ ಕೆಲವು ವಿಚಾರಗಳು ಪ್ರಸ್ತಾಪವಾಗಿವೆ.

ಗಂಗಾಂಬಿಕೆ ಬಿಜ್ಜಳನ ಮಂತ್ರಿಯಾಗಿದ್ದ ಬಲದೇವನ ಮಗಳು. ಸಕಲ ಗುಣಸಂಪನ್ನೆಯಾಗಿ ಎಲ್ಲರ ಪ್ರೀತಿಗೆ ಪಾತ್ರಳಾಗಿದ್ದಳು. ಬಲದೇವ ತನ್ನ ಪ್ರೀತಿಯ ಮಗಳಿಗೆ ಸಾಹಿತ್ಯ, ಸಂಗೀತ, ಯುದ್ಧ ವಿದ್ಯೆಯಲ್ಲಿ ಪಾರಂಗತಳನ್ನಾಗಿ ಮಾಡಿದ ಬಗ್ಗೆ ತಿಳಿದು ಬರುತ್ತದೆ. ವಯಸ್ಸಿಗೆ ಬಂದ ಮಗಳಿಗೆ ಅನುರೂಪನಾದ ವರನಿಗೆ ಕೊಡಬೇಕೆಂದು ಯೋಚಿಸುತ್ತಿರುವಾಗ, ಅವರ ಗಮನಕ್ಕೆ ಬಂದವರು ತಮ್ಮ ಸೋದರಿ ಮಾದಲಾಂಬಿಕೆಯ ಮಗ ಬಸವಣ್ಣನವರಿಗೆ ಏಕೆ ಕೊಡಬಾರದು ಎಂದು ಯೋಚಿಸುವುದರ ಜೊತೆಗೆ ಕಾರ್ಯರೂಪಕ್ಕೆ ತಂದರು.

ಬಸವಣ್ಣನವರು ಗಂಗಾಂಬಿಕೆಯ ಕೈಹಿಡಿದ ಮೇಲೆ ಪತಿಯ ಇಚ್ಛೆಯನ್ನರಿತು ಅವರು ಬೇಕು ಬೇಡಗಳನ್ನು ಸೂಕ್ಷ್ಮವಾಗಿ ಗಮನಿಸಿ, ಅರ್ಥ ಮಾಡಿಕೊಂಡು ನಡೆಯುವುದರ ಮೂಲಕ ಬಸವಣ್ಣನವರ ಮನವನ್ನು ಗೆದ್ದ ಮಹಾಸತಿ. ಬಸವಣ್ಣನವರ ಎರಡನೆಯ ಮಡದಿಯಾದ ನೀಲಾಂಬಿಕೆಯನ್ನು ಸವತಿ ಮತ್ಸರದಿಂದ ನೋಡದೆ ತಂಗಿಯ ಸ್ಥಾನವನ್ನು ನೀಡಿ ಪ್ರೀತಿಯಿಂದ ನೋಡಿಕೊಂಡಿದ್ದು ಆಕೆಯಲ್ಲಿನ ಹೃದಯ ಶ್ರೀಮಂತಿಕೆಯ ದ್ಯೋತಕ.

ಶರಣೆ ಗಂಗಾಂಬಿಕೆ ಸದಾ ಅಂತರಂಗವನ್ನು ಶುದ್ಧಿಯಾಗಿಟ್ಟುಕೊಂಡು ತನ್ನನ್ನು ಆತ್ಮವಿಮರ್ಶೆಗೆ ಒಳಪಡಿಸಿಕೊಳ್ಳುತ್ತಾ, ಚೈತನ್ಯದ ಚಿಲುಮೆಯಾಗಿ ಮಹಾಮನೆಗೆ ಬೆಳಕಾಗಿದ್ದಳು.

ಬಸವಣ್ಣನವರು ವಹಿಸಿದ ಗುರುತರವಾದ ಜವಾಬ್ದಾರಿಯನ್ನು ಹೊತ್ತು ನಿಸ್ಪೃಹತೆಯಿಂದ ಸೇವೆಗಾಗಿ ತನ್ನನ್ನು ಅರ್ಪಿಸಿಕೊಂಡು ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದಳು. ಮಹಾಮನೆಯ ದಾಸೋಹ ಕಾಯಕವನ್ನು ನಿಷ್ಠೆ, ಪ್ರೀತಿ, ತಾಧ್ಯಾತ್ಮಭಾವದಿಂದ ಮಾಡುತ್ತಾ, ಮಹಾಮನೆಯಲ್ಲಿ ಶರಣರ ದಾಸೋಹಕ್ಕೆ ಕಿಂಚಿತ್ತೂ ಲೋಪಬಾರದಂತೆ ಬಸವಣ್ಣನವರ ಆಶಯವನ್ನು ಸಾಕಾರಗೊಳಿಸಿದ ಧೀಶಕ್ತಿಯುಳ್ಳ ಮಹಾಮಾತೆ. ದಿನದಿಂದ ದಿನಕ್ಕೆ ಮಹಾಮನೆಗೆ ಬರುವ ಶರಣರ ಸಂಖ್ಯೆ ಹೆಚ್ಚಾಗುತ್ತಿ ದ್ದಂತೆಯೇ, ಗಂಗಾಂಬಿಕೆಯವರ ಜವಾಬ್ದಾರಿಯೂ ಹೆಚ್ಚಾಗುತ್ತಿತ್ತು. ಎಲ್ಲವನ್ನು ತಾಳ್ಮೆಯಿಂದ, ಸಹನೆಯಿಂದ, ಶ್ರದ್ಧೆಯಿಂದ ಮಾಡುವಲ್ಲಿ ಸಂತೋಷವನ್ನು, ತೃಪ್ತಿಯನ್ನು ಕಾಣುತ್ತಿದ್ದಳು. ಬಸವಣ್ಣನವರ ಅವಿಭಾಜ್ಯ ಅಂಗವಾದ ದಾಸೋಹ ನಡೆಸುವಾಗ ಕ್ಲಿಷ್ಟಕರವಾದ ಸಮಸ್ಯೆಗಳು ಎದುರಾದರೂ, ಅವುಗಳನ್ನು ಬಸವಣ್ಣನವರ ಗಮನಕ್ಕೆ ತಾರದೇ ತಾನೇ ಬಗೆಹರಿಸುತ್ತಿದ್ದ ರೀತಿಯನ್ನು ಕಂಡು ಬಸವಣ್ಣನವರೇ ಅಭಿಮಾನಪಡುತ್ತಿದ್ದರು.

ಹರಿಹರ ಗಂಗಾಂಬಿಕೆಯ ಸಾಂಸಾರಿಕ ಜೀವನದ ಬಗ್ಗೆ ಹೇಳುತ್ತಾ, ಆಕೆಗೆ ಸಿದ್ಧರಸನೆಂಬ ಮಗನಿದ್ದನೆಂದು ಹೇಳಿದ್ದಾನೆ, ಆದರೆ ಉಳಿದ ಪುರಾಣ, ಕಾವ್ಯಗಳಲ್ಲಿ ಈ ಬಗ್ಗೆ ಪ್ರಸ್ತಾಪವಿಲ್ಲ. ಆಕೆಯ ನಾಲ್ಕು ವಚನಗಳಲ್ಲಿ ತನ್ನ ಕರುಳಕುಡಿಯನ್ನು ಕಳೆದುಕೊಂಡ ಹೆತ್ತೊಡಲು ನೋವಿನಿಂದ ಕೊರಗುವುದು ವ್ಯಕ್ತವಾಗಿದೆ.

ಗಂಗಾಂಬಿಕೆ ಮಹಾಮನೆಯ ಗುರುತರವಾದ ಹೊಣೆಗಾರಿಕೆಯ ಮಧ್ಯದಲ್ಲಿಯೂ ಬಿಡುವು ಮಾಡಿಕೊಂಡು ಅನುಭವ ಮಂಟಪದಲ್ಲಿ ನಡೆಯುವ ಮುಕ್ತ ಚರ್ಚೆಯಲ್ಲಿ ಭಾಗವಹಿಸಿ ತನ್ನಲ್ಲುಂಟಾದ ಸಂಶಯಗಳಿಗೆ ಚರ್ಚೆ ಮೂಲಕ ಪರಿಹಾರವನ್ನು ಕಂಡುಕೊಳ್ಳುತ್ತಿದ್ದಳು. ಆಕೆ 'ಗಂಗಾಪ್ರಿಯ ಕೂಡಲ ಸಂಗಮದೇವಾ' ವಚನಾಂಕಿತದಿಂದ ವಚನಗಳನ್ನು ರಚಿಸಿರುವುದನ್ನು ಗಮನಿಸಬಹುದು. ಕರ್ಮಯೋಗಿ ಸಿದ್ಧರಾಮೇಶ್ವರರು ತಮ್ಮ ವಚನವೊಂದರಲ್ಲಿ ಶರಣರು ಬರೆದಿರಬಹುದಾದ ವಚನಗಳ ಸಂಖ್ಯೆಯನ್ನು ದಾಖಲಿಸಿದ್ದಾರೆ.

**"ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ**
**ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮೂವತ್ತಾರು ಸಾಸಿರ**
**ಎಮ್ಮಯ್ಯಗಳ ವಚನ ವಚನಕ್ಕೊಂದು**
**ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ**
**ಗಂಗಾಂಬಿಕೆಯ ವಚನ ಲಕ್ಷದ ಎಂಟು ಸಾಸಿರ**
**ಎಮ್ಮಕ್ಕ ನಾಗಾಯಿಯ ವಚನ ಮೂರು ಲಕ್ಷದ ತೊಂಬತ್ತಾರು ಸಾಸಿರ**
**ಮಡಿವಾಳಣ್ಣನ ವಚನ ಮೂರು ಕೋಟಿ ಮುನ್ನೂರು ಸಾಸಿರ**
**ಹಡದಪ್ಪಯ್ಯಗಳ ವಚನ ಹನ್ನೊಂದು ಸಾಸಿರ**
**ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ**
**ಇಂತಪ್ಪ ವಚನದ ರಚನೆಯ ಬಿಟ್ಟು**
**ಹುಡಿಮಣ್ಣ ಹೊಯ್ಯದೆ ಮಾಬನೆ**
**ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ,**
**ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನಾ."**

ಸಿದ್ಧರಾಮನ ಈ ವಚನದ ಆಧಾರದ ಮೇಲೆ ಹೇಳುವುದಾದರೆ ಗಂಗಾಂಬಿಕೆ 'ಒಂದು ಲಕ್ಷದ ಎಂಟು ಸಾಸಿರ' ವಚನಗಳನ್ನು ಬರೆದಿದ್ದಾಳೆಂದು ಹೇಳಬಹುದು. ಆದರೆ ನಮಗೆ ದೊರಕಿರುವ ವಚನಗಳು ಒಂಬತ್ತು ಮಾತ್ರ. ಈ ಒಂಬತ್ತು ವಚನಗಳು ಕರ್ನಾಟಕ ಸರ್ಕಾರ,



ಕರ್ನಾಟಕ ಪುಸ್ತಕ ಪ್ರಾಧಿಕಾರದ ವತಿಯಿಂದ ಪ್ರಕಟಿಸಿರುವ ಶಿವಶರಣೆಯರ ವಚನ ಸಂಪುಟದಲ್ಲಿ ಪ್ರಕಟವಾಗಿದೆ. (ಪು. ೨೩೮-೨೪೦) ಸಿದ್ಧರಾಮ ಉಲ್ಲೇಖಿಸಿರುವ ವಚನಗಳ ಸಂಖ್ಯೆ ಉತ್ಪ್ರೇಕ್ಷೆಯೆನಿಸಿಬಹುದಾದರೂ ಸಂಪೂರ್ಣವಾಗಿ ಅಲ್ಲಗಳೆಯುವಂತಿಲ್ಲ. ಏಕೆಂದರೆ ಕಲ್ಯಾಣ ಕ್ರಾಂತಿಯಾದಾಗ, ಕಲ್ಯಾಣವನ್ನು ಬಿಟ್ಟು ವಚನಗಳ ಹೊತ್ತಿಗೆಗಳನ್ನು ರಕ್ಷಿಸಲು ತೆಗೆದುಕೊಂಡು ಹೋಗುವಾಗ ಶತ್ರುಗಳ ಕೈಗೆ ಸಿಕ್ಕ ಕೆಲವು ವಚನಗಳ ಕಟ್ಟು ನಾಶವಾಗಿರಬಹುದು. ಅವುಗಳಲ್ಲಿ ಗಂಗಾಂಬಿಕೆಯು ರಚಿಸಿದ ವಚನಗಳೂ ಸೇರಿರಬಹುದು.

ಗಂಗಾಂಬಿಕೆ ತಾಯಿಯಾದರೂ, ತನ್ನ ಕರುಳ ಕಂದನಿಗೆ ತಾಯ್ತನದ ಪ್ರೀತಿ, ವಾತ್ಸಲ್ಯ, ಮಮತೆಯನ್ನು ತೋರಿಸುವ ಭಾಗ್ಯ ಬಹಳ ಕಾಲ ಉಳಿಯಲಿಲ್ಲ. ಅಕಾಲ ಮೃತ್ಯುವಿಗೆ ತುತ್ತಾದ ಮಗ ಸಿದ್ಧರಸನನ್ನು ಕಳೆದುಕೊಂಡ ಆ ತಾಯಿ ಹೃದಯ ಜರ್ಜರಿತವಾಗುತ್ತದೆ. ಮಗುವನ್ನು ನೆನೆನೆನೆದು ದುಃಖಿಸುತ್ತಾಳೆ. ಆಗ ತನ್ನ ಪತಿ ಬಸವಣ್ಣ ಸಂತೈಸಿದ ರೀತಿಯನ್ನು ವಚನದ ಮೂಲಕ ಹೃದಯ ತಟ್ಟುವಂತೆ ಹೇಳಿದ್ದಾಳೆ –

**ಅವಳ ಕಂದ ಬಾಲಸಂಗ ನಿನ್ನ ಕಂದ ಚೆನ್ನಲಿಂಗ**
**ಎಂದು ಹೇಳಿದರಮ್ಮಾ ಎನ್ನ ಒಡೆಯರು**
**ಫಲವಿಲ್ಲದ ಕಂದ ನಿರ್ಪನವಳಿಗೆ**
**ಎನಗೆ ಫಲವಿಲ್ಲ, ಕಂದನಿಲ್ಲ,**
**ಇದೇನೋ ದುಃಖದಂದುಗ**
**ಗಂಗಾಪ್ರಿಯ ಕೂಡಲಸಂಗಮದೇವಾ?**

ಪುತ್ರಶೋಕ ನಿರಂತರವಾದುದು. ಭೂತಾಯ ಗರ್ಭದಲ್ಲಿ ಲೀನವಾಗುವವರಿಗೂ ದುಃಖಕ್ಕೆ, ಹೃದಯ ವೇದನೆಗೆ ಕೊನೆಯಿಲ್ಲ. ತನ್ನ ಕರುಳ ಕುಡಿಯನ್ನು ಕಳೆದುಕೊಂಡು ದುಃಖ ಸಾಗರದಲ್ಲಿ ಮುಳುಗಿರುವ ಪತ್ನಿಯನ್ನು ಕಂಡು ಬಸವಣ್ಣನವರು ತಮಗಾಗುವ ನೋವನ್ನು ಅದುಮಿಟ್ಟುಕೊಂಡು, ಹೊರಗೆ ತೋರ್ಪಡಿಸದೆ ಗಂಗಾಂಬಿಕೆಗೆ ಸಾಂತ್ವನ ಹೇಳುತ್ತಾರೆ. ಅಂಗೈಯಲ್ಲಿರುವ ಇಷ್ಟಲಿಂಗವನ್ನೆ ಕಂದನೆಂದು ಭಾವಿಸು ಎಂದು ಸಮಾಧಾನ ಹೇಳಿರುವಂತಿದೆ. ಚನ್ನಬಸವಣ್ಣನಲ್ಲಿ ಕಳೆದುಕೊಂಡ ನಿನ್ನ ಕಂದನನ್ನು ಕಾಣು ಎಂದು ಹೇಳಿರುವುದು ಅರ್ಥಪೂರ್ಣವಾಗಿದೆ. ಈ ವಚನವನ್ನು ಗಮನಿಸಿದಾಗ ಹರಿಹರ ಹೇಳಿರುವ ಮಗುವಿನ ವಿಚಾರ ಸತ್ಯವೆನಿಸುತ್ತದೆ.

ಗಂಗಾಂಬಿಕೆ ತನ್ನ ಮತ್ತೊಂದು ವಚನದಲ್ಲಿ ಕಂದನನ್ನು ಕಳೆದುಕೊಂಡಾಗ ಆಗುವ ನೋವನ್ನು ತೋಡಿಕೊಂಡಿದ್ದಾಳೆ. ಇದು ಬೆಡಗಿನ ವಚನದಂತೆ ಕಂಡುಬರುತ್ತದೆ.

**ಒಂದು ಹಾಳಭೂಮಿಯ ಹುಲಿಬಂದು**
**ಎನ್ನ ಎಳಗರುವ ಭಕ್ಷಿಸಿತ್ತಲ್ಲಾ !**
**ಆ ಹುಲಿ ಹಾಳಿಗೆ ಹೋಗದು**
**ಆ ಹುಲಿ ಎಳೆಗರುವ ಕಂಡು ಜನನಿಯಾಯಿತ್ತು**
**ಇದನೇನೆಂಬೆ ಗಂಗಾಪ್ರಿಯ ಕೂಡಲಸಂಗಮದೇವಾ !**

ಈ ವಚನವೂ ಕೂಡ ಚಿಕ್ಕವಯಸ್ಸಿನ ಮಗನನ್ನು ಕಳೆದುಕೊಂಡಾಗ ಆಗುವ ನೋವನ್ನು ಅಭಿವ್ಯಕ್ತಿ ಪಡಿಸಿದ್ದಾಳೆ. ಹುಲಿಯನ್ನು ಕಾಲನಿಗೆ ಹೋಲಿಸಿರು ವಂತಿದೆ. ಎಲ್ಲಿತ್ತೋ ಆ ಕಾಲನೆಂಬ ಹುಲಿ ಸದ್ದಿಲ್ಲದೆ ಬಂದು ತನ್ನ ಮಗುವನ್ನು ಭಕ್ಷಿಸಿತು ಎಂದು ಹೇಳುವಾಗ ಆಕೆಯ ಹೃದಯ ಸುಣ್ಣ ಬಿರಿದಂತೆ ಬಿರಿದಿದೆ. ನೋವಿನಿಂದ ಭಗವಂತನನ್ನು ಪ್ರಶ್ನಿಸುತ್ತಾಳೆ.

ಆದರೆ ಆ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯುತ್ತದೆ.

ತನ್ನ ಮನದೊಡೆಯ, ಮನೆಯೊಡೆಯ ಬಸವಣ್ಣನವರ ಘನ ವ್ಯಕ್ತಿತ್ವವನ್ನು ತನ್ನ ವಚನವೊಂದರಲ್ಲಿ ಅನಾವರಣ ಗೊಳಿಸಿದ್ದಾಳೆ.

**ಸಾಂದ್ರವಾಗಿ ಹರಗಣಭಕ್ತಿಯ ಮಾಳ್ಪನೆಂತೊ**
**ಮಾದಲಾಂಬಿಕಾನಂದನನು?**
**ಸಾಂದ್ರವಾಗಿ ಬಿಜ್ಜಳನರಮನೆಯ ನ್ಯಾಯ ನೋಳ್ಪನೆಂತೊ**
**ಮಾದರಸನ ಮೋಹದ ಮಗನು?**
**ಸಾಂದ್ರವಾಗಿ ಲಿಂಗಾರ್ಚನೆ ಲಿಂಗತೃಪ್ತಿ ಅನುಗೆಯ್ವನೆಂತೊ**
**ಗಂಗಾಪ್ರಿಯ ಕೂಡಲಸಂಗನ ಶರಣ ಚೆನ್ನ?**

ಬಸವಣ್ಣನವರ ಬಹುಮುಖ ಕಾರ್ಯಕ್ಷಮತೆ ಯನ್ನು, ಅವರು ಲೋಕಕಲ್ಯಾಣಕ್ಕಾಗಿ ತಮ್ಮನ್ನು ಸಮರ್ಪಿಸಿಕೊಂಡ ರೀತಿಗೆ ಬೆರಗಾಗಿದ್ದಾಳೆ. ಸಾಂದ್ರವಾಗಿ ಎಂದು ಬಳಸಿರುವ ರೀತಿ ಅವರ ಆಸಾಧಾರಣ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುತ್ತದೆ. ಬಸವಣ್ಣನ ವರನ್ನು 'ಮಾದರಸನ ಮಗ' 'ಮಾದಲಾಂಬಿಕೆಯ ಮುದ್ದಿನ ಮಗ' ಎಂದು ಆತ್ಮೀಯತೆಯಿಂದ ಸಂಬೋಧಿಸಿದ್ದಾಳೆ. ಬಿಜ್ಜಳನ ಪ್ರಧಾನಮಂತ್ರಿಯಾಗಿ ಉತ್ತಮವಾದ ಆಡಳಿತವನ್ನು ನಡೆಸುವುದರ ಜೊತೆಗೆ, ಸಮಾಜೋ ಧಾರ್ಮಿಕ ಚಳವಳಿಯನ್ನು ಸಮರ್ಥವಾಗಿ ನಿರ್ವಹಿಸುತ್ತಿರುವ ಬಗ್ಗೆ ಶರಣೆ ಗಂಗಾಂಬಿಕೆಗೆ ಅಭಿಮಾನವಿತ್ತು. ಧನ್ಯತಾಭಾವನೆಯಿತ್ತು. ಈ ವಚನ ಐತಿಹಾಸಿಕವಾಗಿ ಮಹತ್ವವನ್ನು ಪಡೆದಿದೆ.

ಸಿದ್ಧರಾಮ ಹಾಗೂ ಮಡಿವಾಳ ಮಾಚಯ್ಯನ ಬಗ್ಗೆ ಅಪಾರವಾದ ಪ್ರೀತಿ, ಗೌರವ, ಅಭಿಮಾನವನ್ನಿಟ್ಟು ಕೊಂಡಿದ್ದ ಗಂಗಾಂಬಿಕೆ ಅವರಿಬ್ಬರ ವ್ಯಕ್ತಿತ್ವವನ್ನು ಒಂದೊಂದು ವಚನದಲ್ಲಿ ಪರಿಚಯ ಮಾಡಿ ಕೊಟ್ಟಿದ್ದಾಳೆ. ಸಿದ್ಧರಾಮನನ್ನು ಕುರಿತು –

**ನೇತ್ರ ಮಧ್ಯದಲ್ಲಿ ಸೂಸುವ**
**ತ್ರಿಣೇತ್ರನ ರೂಪವೆ ಸಿದ್ಧರಾಮಯ್ಯನಾದ.**
**ಜಿಹ್ವೆಯ ಮಧ್ಯದಲ್ಲಿ ಸೂಸುವ**
**ರುಚಿಯೆ ಸಿದ್ಧರಾಮಯ್ಯನಾದ.**
**ಶ್ರೋತ್ರದಲ್ಲಿ ತುಂಬಿ ಪೂರೈಸುವ**
**ಶಬ್ದವೆ ಸಿದ್ಧರಾಮಯ್ಯನಾದ.**
**ಘ್ರಾಣದಲ್ಲಿ ತುಂಬಿ ತುಳುಕುವ**
**ಮೂರ್ತಿಯೆ ಸಿದ್ಧರಾಮಯ್ಯನಾದ.**
**ತ್ವಕ್ಕಿನಲ್ಲಿ ಅರಿವ ಮೂರ್ತಿಯೆ**
**ಅಚ್ಚೊತ್ತಿದ ಸಿದ್ಧರಾಮಯ್ಯನಾದ.**
**ಇಂತಪ್ಪ ಪರಶಿವಮೂರ್ತಿ**
**ಸಿದ್ಧರಾಮಯ್ಯನ ಪಾದೋದಕವಕೊಂಡು**
**ಪರವಸ್ತು ನಾನಾದೆ, ಗಂಗಾಪ್ರಿಯ**
**ಕೂಡಲಸಂಗಮದೇವಾ.**

ಸಿದ್ಧರಾಮನ ಅತಿಶಯವಾದ ಮಹಿಮಾ ಗುಣಗಳಿಂದ ಪ್ರಭಾವಿತಳಾಗಿ, ಅವನಲ್ಲಿ ಶಿವನನ್ನು ಕಂಡ ಬಗೆ ಅನನ್ಯವಾದುದು.



ಪತಿಯಾಜ್ಞೆಯನ್ನು ಮಸ್ತಕದ ಮೇಲೆ ಹೊತ್ತು ಯಾವುದೇ ರೀತಿಯ ಚ್ಯುತಿಬಾರದಂತೆ ನಡೆದುಕೊಂಡ ಮಹಾ ಪತಿವ್ರತಾ ಶಿರೋಮಣಿ. ಆಕೆ ತನ್ನ ಮತ್ತೊಂದು ವಚನದಲ್ಲಿ –

**"ಪತಿಯಾಜ್ಞೆಯಲ್ಲಿ ಚರಿಪ ಸತಿಗ್ಯಾಕೆ ಪ್ರತಿಜ್ಞೆಯು ?**
**ಪ್ರತಿಜ್ಞೆಯ ಪತಿಕರದಲ್ಲಿ ಪೋಪದಿರೆ ಯಾತನೆಯಲ್ಲವೆ ?**
**ಇವಳ ಲಿಂಗನಿಷ್ಠೆ ಇವಳಿಗೆ,**
**ನಮ್ಮ ನಿಷ್ಠೆ ಪತಿಯಾಜ್ಞೆಯಲ್ಲಿ ಕಾಣಾ**
**ಗಂಗಾಪ್ರಿಯ ಕೂಡಲಸಂಗಮದೇವಾ.**

ಪತಿಯಾಜ್ಞೆಯಲ್ಲಿ ನಡೆಯುವ ಸತಿಗೆ ಪ್ರತಿಜ್ಞೆ ಏಕೆ? ಎಂಬ ಪ್ರಶ್ನೆ ಹನ್ನೆರಡನೆ ಶತಮಾನದಲ್ಲಿದ್ದ ಎಲ್ಲ ಶಿವಶರಣೆಯರಿಗೂ ಅನ್ವಯವಾಗುತ್ತದೆ. ಪತಿಯು ಹೇಳಿದ್ದು ವೇದವಾಕ್ಯ ಎಂದು ಪರಿಭಾವಿಸಿ ಅದರಂತೆ ನಡೆದುಕೊಳ್ಳುತ್ತಿದ್ದರು. ಒಂದು ವೇಳೆ, ಅನಿವಾರ್ಯ ಕಾರಣಗಳಿಂದ ಸಾಧ್ಯವಾಗದಿದ್ದರೆ ಮಾನಸಿಕವಾಗಿ ಯಾತನೆಪಡುತ್ತಿದ್ದ ಬಗ್ಗೆ ಈ ವಚನದಲ್ಲಿ ಧ್ವನಿಸುತ್ತದೆ. 'ಇವಳ ಲಿಂಗನಿಷ್ಠೆ ಇವಳಿಗೆ' ಎಂಬುದು ತನ್ನ

ತಂಗಿ ನೀಲಾಂಬಿಕೆಯನ್ನು ಕುರಿತು ಹೇಳಿರಬೇಕು. ನೀಲಾಂಬಿಕೆ ಕಲ್ಯಾಣದ ನೆಲಮಾಳಿಗೆಯ ಜ್ಞಾನಪ್ರಕಾಶ ಮಂಟಪದಲ್ಲಿ ಲಿಂಗಪೂಜಾನುಷ್ಠಾನದಲ್ಲಿ ತನ್ಮತೆಯಿಂದ ನಿರತಳಾಗುತ್ತಿದ್ದುದನ್ನು ಕಂಡ ಅನೇಕ ಶರಣರು ಪ್ರಶಂಸಿರುವುದನ್ನು ಕಾಣುತ್ತೇವೆ.

ಕಲ್ಯಾಣದಲ್ಲಿ ಹರಳಯ್ಯನ ಮಗನಿಗೂ, ಮಧುವರಸನ ಮಗಳಿಗೂ ಅಂತರ್‌ಜಾತಿ ವಿವಾಹ ನಡೆದಾಗ ವರ್ಣಸಂಕರವಾಯಿತೆಂದು ಸಂಪ್ರದಾಯ ವಾದಿಗಳು ರಾಜ ಬಿಜ್ಜಳನಲ್ಲಿ ದೂರು ನೀಡಿದಾಗ, ಚಾಡಿಮಾತುಗಳಿಗೆ ಕಿವಿಯಾದ ಬಿಜ್ಜಳನು ತನ್ನ ವಿಚಾರಶಕ್ತಿಯನ್ನು ಕೋಪಕ್ಕೆ ಕೊಟ್ಟು ಹರಳಯ್ಯ ಮಧುವರಸರಿಗೆ ಎಳೆಹೂಟಿಯಿಂದ ದೇಹಾಂತ ಶಿಕ್ಷೆಯನ್ನು ವಿಧಿಸಿದಾಗ ಕಲ್ಯಾಣದಲ್ಲಿ ಕ್ಷೋಭೆ ಯುಂಟಾಯಿತು. ಇದರಿಂದ ಮನನೊಂದ ಬಸವಣ್ಣನವರು ಅಶಾಂತಿಯ ಗೂಡಾಗಿ ಪರಿವರ್ತಣೆ ಗೊಂಡ ಕಲ್ಯಾಣದಲ್ಲಿ ಇನ್ನಿರಬಾರದು ಎಂದು ನಿಶ್ಚಯಿಸಿ ಕಲ್ಯಾಣವನ್ನು ತೊರೆದು ಕೂಡಲ ಸಂಗಮದತ್ತ ಮುಖ ಮಾಡುತ್ತಾರೆ. ಬಸವಣ್ಣನವರಿಲ್ಲದ ಕಲ್ಯಾಣ, ಮಹಾಮನೆ ಯಲ್ಲಿ ಕತ್ತಲಾವರಿಸಿತ್ತು. ಒಂದು ರೀತಿಯಲ್ಲಿ ಅನಾಥಪ್ರಜ್ಞೆ ಕಾಡುತ್ತಿತ್ತು. ಬಸವಣ್ಣನವರು ಪತ್ನಿಯರನ್ನು ಕರೆತರಲು ಜೊತೆಯಲ್ಲಿದ್ದ ಶರಣ ಹಡಪದಪ್ಪಣ್ಣನನ್ನು ಕಲ್ಯಾಣಕ್ಕೆ ಕಳುಹಿಸುತ್ತಾರೆ.

ಆದರೆ ಹಡಪದಪ್ಪಣ್ಣ ಕಲ್ಯಾಣಕ್ಕೆ ಬರುವಷ್ಟರಲ್ಲಿ ಬಿಜ್ಜಳನ ಕೊಲೆಯಾಗಿ ಕಲ್ಯಾಣದಲ್ಲಿ ರಕ್ತಪಾತವಾಗಿರುತ್ತದೆ. ಶರಣರು ಕಲ್ಯಾಣದಲ್ಲಿ ಬದುಕುಳಿಯಲಾಗದಂಥ ವಾತಾವರಣ ಹದಗೆಟ್ಟಿತ್ತು. ಆಗ ಹಡಪದಪ್ಪಣ್ಣ ಬಸವಣ್ಣನವರ ಆದೇಶವನ್ನು ಗಂಗಾಂಬಿಕೆ, ನೀಲಾಂಬಿಕೆಯರಿಗೆ ತಿಳಿಸುತ್ತಾನೆ. ಗಂಗಾಂಬಿಕೆ ಮಾನಸಿಕ ಗೊಂದಲಕ್ಕೊಳಗಾಗುತ್ತಾಳೆ. ಒಂದು ಕಡೆ ಪತಿಯ ಆಣತಿ, ಮತ್ತೊಂದು ಕಡೆ ಕರ್ತವ್ಯ ಪ್ರಜ್ಞೆ. ಎರಡೂ ಮುಖ್ಯವೇ ಆದರೆ ಯಾವುದನ್ನು ಆಯ್ಕೆಮಾಡಿಕೊಳ್ಳಬೇಕೆಂಬ ಜಿಜ್ಞಾಸೆ. ಕಲ್ಯಾಣದಲ್ಲಿ ಬಿಜ್ಜಳನ ಸೈನಿಕರು ದ್ವೇಷದಿಂದ ಕಂಡ ಕಂಡ ಶರಣರನ್ನು ಹತ್ಯೆ ಮಾಡುತ್ತಾ ಅಮೂಲ್ಯವಾದ, ಅಪಾರವಾದ ವಚನ ಭಂಡಾರವನ್ನು ಸೂರೆಗೊಳ್ಳುತ್ತಿರುವಾಗ ಶರಣರ ರಕ್ಷಣೆ, ವಚನಗಳ ಹೊತ್ತಿಗೆಗಳನ್ನು ರಕ್ಷಣೆ ಮಾಡಲು ಚೆನ್ನಬಸವಣ್ಣನವರಿಗೆ ಸಹಾಯಕಳಾಗಿ ನಿಲ್ಲುವುದೂ ತನ್ನ ಆದ್ಯ ಕರ್ತವ್ಯವಲ್ಲವೆ ಎಂಬ ತೊಳಲಾಟ ಗಂಗಾಂಬಿಕೆಯ ಮನವನ್ನು ಕಾಡುತ್ತದೆ. ಈ ಗೊಂದಲಗಳಿಗೆ ಪರಿಹಾರ ಕಂಡುಕೊಳ್ಳಲು ಗುರುಗಳಾದ ಘನಲಿಂಗ ರುದ್ರಮುನಿಗಳ ಬಳಿಗೆ ಹೋಗಿ ಬಿನ್ನವಿಸಿಕೊಳ್ಳುತ್ತಾಳೆ.

ಆ ವೇಳೆಗಾಗಲೇ ಗುರುಗಳು ಶರಣರ ಆತ್ಮ ರಕ್ಷಣೆಗಾಗಿ ಒಂದು ಚಿಕ್ಕಪಡೆಯನ್ನು ಸಿದ್ಧಗೊಳಿಸಿರುತ್ತಾರೆ. ಅವರು ಗಂಗಾಂಬಿಕೆಯನ್ನು ಕುರಿತು ಹೀಗೆ ಹೇಳುತ್ತಾರೆ : "ತಾಯೇ ನಾವೆಲ್ಲ ಈಗ ಮಡಿವಾಳ ಮಾಚಿದೇವ, ಚನ್ನಬಸವಣ್ಣನವರ ನೇತೃತ್ವದಲ್ಲಿ ಆದಷ್ಟು ಬೇಗ ಕಲ್ಯಾಣ ಬಿಟ್ಟು ಹೊರಟರೆ ಶರಣರ ರಕ್ಷಣೆ ಸಾಧ್ಯ. ಈ ಕಾರ್ಯದಲ್ಲಿ ಧೀರಳಾದ ನಿನ್ನ ನೆರವಿದ್ದರೆ ನಮ್ಮ ಮುಂದಿನ ಕಾರ್ಯ ಯಶಸ್ವಿಯಾಗುತ್ತದೆ. ಈಗ ನಿನ್ನ ನೆರವು, ದಿಟ್ಟತನ ಚೆನ್ನಬಸವಣ್ಣನಿಗೆ ಅಗತ್ಯವಾಗಿದೆ. ಶರಣರ ಬಳಿ ನೀನಿದ್ದರೆ ಅವರಿಗೆ ಮಾತೃ ರಕ್ಷಣೆ ನೀಡಿದಂತಾಗುತ್ತದೆ" ಎಂದು ಹೇಳಿದ ಗುರುವಾಣಿ ಆಕೆಯಲ್ಲಿ ವಿದ್ಯುತ್ ಸಂಚಾರವಾದಂತಾಗಿ ಕರ್ತವ್ಯ ಪ್ರಜ್ಞೆ ಜಾಗೃತಿಯಾಯಿತು. ಬಾಲ್ಯದಲ್ಲಿ ತಂದೆಯಿಂದ ಕಲಿತ ಯುದ್ಧ ವಿದ್ಯೆಯ ಪ್ರಯೋಜನವನ್ನು ಶರಣರ ರಕ್ಷಣೆಗಾಗಿ ಸದ್ವಿನಿಯೋಗಿಸಿ ಕೊಳ್ಳಬೇಕೆಂಬ ಆಶೆ ಚಿಗುರೊಡೆದು ಕಲ್ಯಾಣವನ್ನು ಬಿಡಲು ಸಿದ್ಧರಾದ ಸಾವಿರಾರು ಜನ ಶರಣರ ಪ್ರಸಾದದ ವ್ಯವಸ್ಥೆಗೆ ನಾಗಲಾಂಬಿಕೆ ನೆರವಿಗೆ ನಿಲ್ಲಬೇಕೆಂಬ ದೃಢ ನಿರ್ಧಾರ ಕೈಗೊಂಡಳು. ಈ ವಿಚಾರವನ್ನು ಹಡಪದಪ್ಪಣ್ಣನ ಮೂಲಕ ಬಸವಣ್ಣನವರಿಗೆ ತಿಳಿಸುವಂತೆ ಹೇಳುತ್ತಾಳೆ.

ಅಮೂಲ್ಯವಾದ ವಚನಗಳ ಕಟ್ಟಿನೊಂದಿಗೆ ಒಂದು ಗುಂಪು ಶ್ರೀಶೈಲ ಮಾರ್ಗವಾಗಿ ಹೊರಟರೆ, ಮತ್ತೊಂದು ಗುಂಪಿನಲ್ಲಿ ಚೆನ್ನಬಸವಣ್ಣ, ನಾಗಲಾಂಬಿಕೆ, ಮಡಿವಾಳ ಮಾಚಿದೇವ, ರುದ್ರಮುನಿ ದೇವರು, ಕಿನ್ನರಿ ಬೊಮ್ಮಯ್ಯ, ಕೂಗಿನ ಮಾರಿತಂದೆ, ಪಡಿಹಾರಿ ಉತ್ತಣ್ಣ, ಹಡಪದ ರೇಚಣ್ಣ, ನುಲಿಯ ಚೆಂದಯ್ಯ, ಸೊಡ್ಡಳ ಬಾಚರಸ, ಡೋಹರ ಕಕ್ಕಯ್ಯ ಸೇರಿದಂತೆ ಅಸಂಖ್ಯಾತ ಶರಣ ಸಮೂಹದಲ್ಲಿ ಕೆಲವರು ವಚನಗಳ ಕಟ್ಟುಗಳನ್ನು ಬೆನ್ನಿಗೆ ಕಟ್ಟಿಕೊಂಡರೆ, ಮತ್ತೆ ಕೆಲವರು ತಲೆಯ ಮೇಲೆ ಹೊತ್ತುಕೊಂಡು ಉಳವಿಯ ಕಡೆ ಹೊರಟರು.

ಬಿಜ್ಜಳನ ಕೊಲೆಯಾದ ಮೇಲೆ ಯಲಬುರ್ಗಿ (ಎರೆಯಂಬರಣಾ)ಯನ್ನು ಬಿಜ್ಜಳನ ಅಳಿಯ ಸೈನಿಕರೊಂದಿಗೆ ಶರಣರನ್ನು ಬೆನ್ನಟ್ಟಿದನು. ಚೆನ್ನಬಸವಣ್ಣ, ಮಡಿವಾಳ ಮಾಚಯ್ಯ ಮುಂಚೂಣಿಯಲ್ಲಿದ್ದು ಶರಣರನ್ನು ರಕ್ಷಿಸುತ್ತಾ ಮುನ್ನಡೆಸಿದರು. ಬೆನ್ನು ಹತ್ತಿದ ಬಿಜ್ಜಳನ ಸೈನಿಕರೊಂದಿಗೆ ಗಂಗಾಂಬಿಕೆ ಖಡ್ಗವನ್ನು ಝಳಪಿಸುತ್ತಾ ಹಿಮ್ಮೆಟಿಸಿದ ವೀರಾಗ್ರಣಿ. ಅನರ್ಘ್ಯ ರತ್ನಗಳಾದ ವಚನಗಳ ಹೊತ್ತಿಗೆಯನ್ನು ರಕ್ಷಿಸುವುದರ ಮೂಲಕ ಮಹದುಪಕಾರ ಮಾಡಿದ ಮಹಾಶರಣೆ. ಕಲ್ಯಾಣದಿಂದ ಹೊರಟ ಶರಣ ಸಮೂಹ ಮುರುಗೋಡ ಮಾರ್ಗವಾಗಿ ಉಳವಿಗೆ ಹೊರಟಾಗ ಮಲಪ್ರಭಾ ನದಿ ತೀರದಲ್ಲಿರುವ ಕಾತರವಳ್ಳಿಯ ಬಳಿ ವೈರಿಗಳೊಂದಿಗೆ ಸೆಣಸಾಡಿ ವಚನ ಸಾಹಿತ್ಯದ ಅಮೂಲ್ಯ ಭಂಡಾರವನ್ನು ರಕ್ಷಣೆ ಮಾಡಿ, ನೆಮ್ಮದಿ, ಸಂತೋಷ, ತೃಪ್ತಿಯಿಂದ ಶಿವಲಿಂಗದೊಳಗೊಂದಾದರು.

ಬಸವಣ್ಣನವರ ಸಹಧರ್ಮಿಣಿಯಾಗಿ, ಅವರ ಆದರ್ಶದ ಮುಂಬೆಳಕಿನಲ್ಲಿ ಬದುಕನ್ನು ಕಟ್ಟಿಕೊಂಡು, ಕಾಯಕವೇ ಕೈಲಾಸ ಎಂದು ಭಾವಿಸಿದ ಗಂಗಾಂಬಿಕೆ ವಚನಕಾರ್ತಿಯಾಗಿ, ಅನುಭಾವಿಯಾಗಿ ಆದರ್ಶ ಸತಿಯಾಗಿ, ಮಾತೆಯಾಗಿ ಬಾಳಿದ ಆಕೆಯ ಜೀವನಗಾಥೆ ಉತ್ಕೃಷ್ಟವಾಗಿದೆ.

●

*ಸಂಪಾದಕರು, ಸಿದ್ಧಗಂಗಾ, ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧*



## ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರು ಶಿವಗಂಗಾ ಕ್ಷೇತ್ರದ ಮೇಲಣಗವಿಮಠಕ್ಕೆ ಕೊಟ್ಟ ಸುರೂಳಿ ನಿರೂಪ

**ಡಾ. ಬಿ. ನಂಜುಂಡಸ್ವಾಮಿ**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ನೆಲಮಂಗಲ ತಾಲ್ಲೂಕು, ಶಿವಗಂಗೆ ಗ್ರಾಮ ಆಲಯಾಶ್ರಿತ ಗ್ರಾಮ. ಈ ಬೆಟ್ಟದಲ್ಲಿ ಈ ಹಿಂದೆ ಅರವತ್ತುನಾಲ್ಕು ವೀರಶೈವ ಮಠಗಳು ಇದ್ದವು. ಈಗ ಮೂರು ಮಠಗಳು ಮಾತ್ರ ಉಳಿದುಕೊಂಡಿವೆ. ಶಿವಗಂಗೆ ಬೆಟ್ಟದ ಮಧ್ಯಭಾಗ ಗುಹಾಂತರ ಮೇಲಣಗವಿಮಠ, ಈ ಮೊದಲು ಇದ್ದ ಮಠದ ಕಟ್ಟಡ ಸುಮಾರು ೧೯೫೬ರಲ್ಲಿ ಬಾರೀ ಮಳೆಗೆ ಕುಸಿದು ಕೊಚ್ಚಿ ಹೋಗಿದೆ. ಮಠದ ಚಿತ್ರಮಂಟಪದ ಭಿತ್ತಿಯಲ್ಲಿ ಸುಂದರವಾದ ಚಿತ್ರಗಳು ಇದ್ದು ಒಂದು ಕೋತಿ ತಕ್ಕಡಿ ಹಿಡಿದುಕೊಂಡು ಗಂಗಾತೀರ್ಥವನ್ನು ಮೇಲಣಗವಿಮಠದ ಒರಳಕಲ್ಲು ತೀರ್ಥವನ್ನು ತೂಕ ಮಾಡುವಂತಹ ಚಿತ್ರ, ಆ ಚಿತ್ರದಲ್ಲಿ ಒರಳಕಲ್ಲು ತೀರ್ಥದ ತೂಕವೇ ಹೆಚ್ಚಾಗಿ ಇರುವಂತಹ ಅಪರೂಪದ ಚಿತ್ರ ಗಿರಿಜಾ ಕಲ್ಯಾಣದ ಚಿತ್ರ (ಗಂಗಾಧರೇಶ್ವರನ ಕಲ್ಯಾಣ ಮಹೋತ್ಸವ) ಜೊತೆಗೆ ನಾಲ್ಕಾರು ಹಿರಿಯ ಸ್ವಾಮಿಗಳ ಗದ್ದುಗೆಗಳು ಕೊಚ್ಚಿ ಹೋಯಿತು. ಈ ಘಟನೆಯನ್ನು ತಮ್ಮ ಬಾಲ್ಯದಲ್ಲಿ ಕಂಡ ಹಿರಿಯ ವಿದ್ವಾಂಸರಾದ ಕಂಬಾಳು ಸಿದ್ಧಗಂಗಯ್ಯನವರು ಅವರ ಜೊತೆಯಲ್ಲಿ ಅಧ್ಯಯನ ಮಾಡಿದ ಕಂಬಾಳು ಶಾಂತಯ್ಯ ನಿವೃತ್ತ ಅಧ್ಯಾಪಕರು ನಮ್ಮ ಜೊತೆ ಇದ್ದಾರೆ. ನನ್ನ ಪ್ರಕಾರ ಮೇಲಣಗವಿಮಠದ ಮಠದ ವಾಸ್ತು ಬಹಳ ವಿಶೇಷವಾದದ್ದು. ಅಳಿದು ಉಳಿದಿರುವ ಅಪರೂಪದ ಗುಹಾಂತರ ಮಠ ಮಹಾದ್ವಾರ, ನವರಂಗ, ಪ್ರದಕ್ಷಿಣಾಪಥವಿದ್ದು ಮಧ್ಯ ಮೂರು ಗರ್ಭಗುಡಿ ಇದ್ದು ಮಧ್ಯದ ಗರ್ಭಗುಡಿಯಲ್ಲಿ ವೀರಭದ್ರಸ್ವಾಮಿಯನ್ನು ಸ್ಥಾಪನೆ ಮಾಡಲಾಗಿದೆ. ಇದೇ ಗರ್ಭಗುಡಿಯಲ್ಲಿ "ರುದ್ರಮುನಿ ಶಿವಾಚಾರ್ಯರು" ಐಕ್ಯರಾಗಿದ್ದು, ನವರಂಗದಿಂದ ಗರ್ಭಗೃಹದ ಪ್ರದಕ್ಷಿಣೆಗೆ ಒಂಭತ್ತು ಮೆಟ್ಟಲು ಹತ್ತಬೇಕು. ನಾಲ್ಕು ಹೆಜ್ಜೆ ನಡೆದ ತಕ್ಷಣ ಜನಸಾಮಾನ್ಯರ ಭಕ್ತಿಭಾವಕ್ಕೆ ಕಾರಣವಾದ "ಒರಳುಕಲ್ಲು ತೀರ್ಥವಿದೆ" ದೀಪದ ಸಹಾಯದಿಂದ ನೋಡಿದರೆ ಬಂಡೆಯ ಕೆಳಗೆ ಜುಳು ಜುಳು ಹರಿಯುವ ತೀರ್ಥವನ್ನು ದರ್ಶನ ಮಾಡಬಹುದು. ಜನ ಕೈಗೆ ತೀರ್ಥವನ್ನು ಸ್ಪರ್ಶ ಮಾಡಲು ಬಂಡೆಯ ಮೇಲೆ ಮಲಗಿ ಮುಟ್ಟಬೇಕು. ಒರಳಕಲ್ಲು ತೀರ್ಥದಿಂದ ಗರ್ಭಗೃಹ ಪ್ರದಕ್ಷಿಣೆ ಬರಲು ಮನುಷ್ಯ ಕುಳಿತೆ ಮುಂದಕ್ಕೆ ಬರಬೇಕು. ನವರಂಗದ ಅರ್ಥಾತ್ ಗುಹೆಯ ಗೋಡೆಗಳು ಬಹಳ ಸುಂದರವಾಗಿ ಪಾಳಿಸಿರುವ ಕಲ್ಲುಗಳಿಂದ ಕಟ್ಟಲ್ಪಟ್ಟಿದೆ.

ಗವಿಯ ಎತ್ತರವಾದ ಜಾಗದಲ್ಲಿ ಒರಳುಕಲ್ಲು ತೀರ್ಥದ ಪಕ್ಕ ಹುಟ್ಟು ಬಂಡೆಯ ಮೇಲೆ ಮೂರು ಗರ್ಭಗುಡಿಯ ಕಟ್ಟಡವಿದೆ. ಕಟ್ಟಡಕ್ಕೆ ಬಳಸಿರುವ ಕಲ್ಲುಗಳು ಅಂದಿನ ದಿನ ಮಾನದಲ್ಲಿ "High Quality" ಮತ್ತು "Neatly polished" ಈಗಾಗಲೇ ಪ್ರಸ್ತಾಪಿಸಿರುವಂತೆ

ಮಧ್ಯದ ಗರ್ಭಗುಡಿಯಲ್ಲಿ ವೀರಭದ್ರಸ್ವಾಮಿಯನ್ನು ಪ್ರತಿಷ್ಠಾಪಿಸಲಾಗಿದೆ. ಸುಮಾರು ಎರಡು ಅಡಿ ಎತ್ತರದ ವೀರಭದ್ರ, ಮಧ್ಯದ ಗರ್ಭಗುಡಿಯ ಎಡಬಲದಲ್ಲಿ ಶಿವದ್ವಾರಪಾಲಕರ ಕೆತ್ತನೆ ಇದೆ. ಎಡಬಲದ ಗರ್ಭಗುಡಿಯ ಇಕ್ಕೆಡೆ ದ್ವಾರಪಾಲಕಿಯರ ಕೆತ್ತನೆ ಇದೆ. ಈ ಎರಡು ಗರ್ಭಗುಡಿಗಳು ರುದ್ರಮುನಿಸ್ವಾಮಿಗಳು ಯೋಗಪತ್ನಿಯರ ಸಮಾಧಿ ಎಂದು ಅಭಿಪ್ರಾಯ ಪಡಲಾಗಿದೆ. ಇತ್ತೀಚೆಗೆ ಒಂದು ಗರ್ಭಗುಡಿಯಲ್ಲಿ ರೇಣುಕರ ವಿಗ್ರಹವನ್ನು ಮತ್ತೊಂದು ಗರ್ಭಗುಡಿಯಲ್ಲಿ ಗಣಪತಿ ವಿಗ್ರಹವನ್ನು ಸ್ಥಾಪನೆ ಮಾಡಲಾಗಿದೆ. ಹಯವದನ್‌ರಾಯರು ತಮ್ಮ ಗ್ಯಾಜೆಟಿಯರ್‌ನಲ್ಲಿ ಮಧ್ಯದ ಗರ್ಭಗುಡಿಯಲ್ಲಿ ಇರುವುದು ಭೈರವ ವಿಗ್ರಹ ಎಂದು ಸರಿಯಾಗಿ ಪರಿಶೀಲಿಸದೆ ಬರೆದುದರಿಂದ ಮುಂದೆ ಅನೇಕ ವಿದ್ವಾಂಸರು ಇದನ್ನೇ ಹೇಳುತ್ತಾ ಬಂದರು. ಬಹಳ ಸುಂದರವಾದ ವೀರಭದ್ರಸ್ವಾಮಿ ವಿಗ್ರಹ ಇಂದಿಗೂ ತ್ರಿಕಾಲ ಪೂಜೆ, ದಾಸೋಹ, ಶಿವಾನುಭವ, ಪುರಾಣ, ಪ್ರವಚನ ಕಾರ್ಯಗಳು ಸಾಂಗವಾಗಿ ಜರಗುತ್ತಾ ಬಂದಿದೆ. ಗುಹಾಂತರ ಮಠದ ಹೊರಭಾಗ ಗುರುಮಠದಲ್ಲಿ "ಶಿಷ್ಯ ಸ್ವೀಕಾರ ಮಂಟಪ" "ಶಿವಪೂಜಾ ಗೃಹ" "ಎಡೆಮನೆ" "ರಾಜಾಂಕಣ" "ಸರಸ್ವತಿ ಭಂಡಾರ" (ಅಪಾರವಾದ ಓಲೆಗರಿ ಸಂಗ್ರಹ ಈ ಮಠದಲ್ಲಿ ಇತ್ತು. ಬಾರೀ ಮಳೆಯ ಸಂದರ್ಭದಲ್ಲಿ ಬಹಳಷ್ಟು ನಾಶವಾಗಿ ಹೋಳೆಯಿತಂತೆ) ಗುರುಮಠದಿಂದ "ಕುಂಭಾವತಿ ತೀರ್ಥಕ್ಕೆ" ಹೋಗಲು ದಾರಿ ಇದೆ. ಇದೇ ತೀರ್ಥದ ನೀರೆ, ಮೇಲಣಗವಿಮಠದ ದಾಸೋಹಕ್ಕೆ, ಪೂಜಾದಿಗಳಿಗೆ ಬಳಸುವುದು. ಕುಂಭಾವತಿ ತೀರ್ಥದ ಹತ್ತಿರ ಗಂಗರ ಕಾಲದ ಸುಂದರವಾದ ಸೂರ್ಯನ ವಿಗ್ರಹವಿದೆ. ಕುಂಭಾವತಿ ತೀರ್ಥ ಇದು ಒಂದು ಗುಹಾಂತರ ತೀರ್ಥ, ತೀರ್ಥದ ಮುಖಕ್ಕೆ ಸುಂದರವಾದ ಕಲ್ಲಿನ ಬಾಗಿಲನ್ನು ನಿರ್ಮಿಸಿದ್ದಾರೆ.

ಶಿವಗಂಗಾ ಕ್ಷೇತ್ರದ ಶ್ರೇಯೋಭಿವೃದ್ಧಿಗೆ ಸಾಕಷ್ಟು ಶ್ರಮಿಸಿದ ಈ ಮಠದ ಏಜೆಂಟ್ ಆಗಿದ್ದ ಲಿಂ|| ಸಾಹುಕಾರ್ ರೇವಣ್ಣನವರು ಬರೆದಿರುವ ದಾಖಲೆಯಲ್ಲಿ ಮಠ ಪರಂಪರೆ ಈ ರೀತಿ ಇದೆ.

ಶ್ರೀಮಚ್ಛಿವಗಂಗಾ ಮಹಾಪರ್ವತ ಪೂರ್ವದಿಗ್ಭಾಗದಲ್ಲಿ ವಿರಾಜಿಸುವ ಪೊಡವಿಡಿ ಮೇಲಣಗವಿ ವೀರಸಿಂಹಾಸನ ಪರಂಪರೆ

೧) ರೇಣುಕರು ೨) ರುದ್ರಮುನಿಸ್ವಾಮಿಗಳು ಅಥವಾ ರುದ್ರಮುನಿ ಶಿವಾಚಾರ್ಯರು ೩) ವುದ್ದಾನಸ್ವಾಮಿಗಳು – ಉದ್ದಾನಸ್ವಾಮಿಗಳು ೪) ರೇವಣಸಿದ್ಧರು ೫) ಚಿಕ್ಕವೀರದೇಶಿಕೇಂದ್ರರು ೬) ಅನ್ನದಾನಸ್ವಾಮಿಗಳು (ಇವರ ಪರಂಪರೆಯಲ್ಲಿ ಮೂರು ಜನ ಸ್ವಾಮಿಗಳು) ೭) ವೀರೇಶ್ವರರು ೮) ಶಾಂತಮಲ್ಲೇಶ್ವರರು ೯) ಸಿದ್ಧರಾಮಸ್ವಾಮಿಗಳು ೧೦) ಶಾಂತನಂಜೇಶ್ವರರು ೧೧) ಗುರುಶಾಂತನಂಜೇಶ್ವರರು ೧೨) ಚಿಕ್ಕಶಾಂತನಂಜೇಶ್ವರರು ೧೩) ಹಲಗೆಯಾಚಾರ್ಯರು ೧೪) ಕೆಂಚವೀರಾರ್ಯರು ೧೫) ಮಲ್ಲಣ್ಣಾರ್ಯರು ೧೬) ಸಣ್ಣಕ್ಕಿ ಸ್ವಾಮಿಗಳು ೧೭) ಮುದ್ದಿನ ಚಿಕ್ಕವೀರಸ್ವಾಮಿಗಳು ೧೮) ರಾಚೋಟಿಸ್ವಾಮಿಗಳು ೧೮೧೬ರಲ್ಲಿ ಸ್ವಾಮಿಗಳಾಗಿ ಇದ್ದವರು. ೧೯) ಚಿಕ್ಕರಾಚೋಟಿಸ್ವಾಮಿಗಳು (ಹುಚ್ಚಪ್ಪ ಸ್ವಾಮಿಗಳು) ೨೦) ಚನ್ನವೀರಸ್ವಾಮಿಗಳು ೨೧) ಚಿಕ್ಕರಾಚೋಟಿಸ್ವಾಮಿಗಳು ೨೨) ಚನ್ನವೀರಸ್ವಾಮಿಗಳು (ಗುರುಸಿದ್ಧಪ್ಪನವರು) ೨೩) ಲಿಂ. ಷ. ಬ್ರ. ಶ್ರೀ ಶ್ರೀ ಚನ್ನವೀರದೇಶಿಕೇಂದ್ರ ಸ್ವಾಮಿಗಳು (ಮಣ್ಣಿ ಪಟ್ಟದದೇವರು) ೧೯೦೦ ರಿಂದ ೧೯೫೪ ೨೩) ಮೃತ್ಯುಂಜಯಸ್ವಾಮಿಗಳು (ಕಿರೀಟ ಮಠ ಸೊಲ್ಲಾಪುರ) ಸ್ವಲ್ಪ ವರ್ಷ



ಸ್ವಾಮಿಗಳಾಗಿದ್ದು ನಂತರ ವಿರಕ್ತಮಠದ ಸ್ವಾಮಿಗಳಾದರು. ೨೪) ಷ|| ಬ್ರ|| ಶ್ರೀ ಶ್ರೀ ವಿಶ್ವಾರಾಧ್ಯ ಶಿವಾಚಾರ್ಯರು ೧೯೫೨ ೨೫) ಶ್ರೀ ಶ್ರೀ ಶ್ರೀ ಷ|| ಬ್ರ|| ಸಿದ್ಧಲಿಂಗ ಶಿವಾಚಾರ್ಯರು (ಇಂದಿನ ರಂಭಾಪುರಿ ಜಗದ್ಗುರುಗಳು) ೧೯೮೪-೧೯೯೧ ೨೬) ಶ್ರೀ ಶ್ರೀ ಷ|| ಬ್ರ|| ಮಲಯ ಶಾಂತಮುನಿ ದೇಶೀಕೇಂದ್ರ ಶಿವಾಚಾರ್ಯರು ೧೯೯೪ ರಿಂದ

ಶ್ರೀಕೃಷ್ಣರಾಜ ಒಡೆಯರ್

೧) ಮನಪೂರ್ರರೈಜಗಂಜೂರಭ ನಾಮ ಆಮಿಲಾನೆ ಶಿರೆಸ್ತೆದಾ
೨) ರಾನೆಹಾಲಿ ಯಿಸ್ತಕಬಾಲ ತಾಲೋಕೆ ನಿಜಗಲ್ಲು ಸರಕಾರ
೩) ದಾರು ಶ್ರೇಯಾಂಸಕ ಮಹಿಶೂರು ಪಾರ ಫಸುದೂರಮೆ
೪) ಯಾಬಾದ ತಾಲೋಕ ಮಜಕೂರ ಪೈಕಿ ಶಿವಗಂಗೆಯಲ್ಲಿ ಇ
೫) ರುವ ಮೇಲಣಗವಿ ರಾಚೋಟಿ ಪಟದೈಗಳಿಗೆ ಅಲ್ಲಿಯ
೬) ಮಠದಲ್ಲಿ ಗಣಾರಾರಾಧಾನೆ ವಗೈರೆ ಖರ್ಚಿನ ಬಗ್ಯೆ ಸರಕಾ
೭) ರದ ಯಿಂದಾ ಸಾಲ್ಲಿನ ಕಂಟಿರಾಯಿ ಯಿನ್ನೂರುವರಹ ೨೦೦/೦
೮) ಪ್ರಕಾರಾ ತಾಲೋಕ ಮಜಕೂರ ಐವಜ ಪೈಕಿ ನಗದು
೯) ಕೊಡತಾ ಬರುವಂತ್ತೆ ಮೊದಲೆ ಹಜೂರ ಯಿಂದ ಸಂನ
೧೦) ದು ಕಟ್ಲೆಮಾಡಿಸಿ ಯಿತಷ್ಟೆ ಯಿದರ ಯಿಂದಾ ಖರ್ಚೆ
೧೧) ಗೆ ಸಾಕಾಗುವದುಯಿಲ್ಲಾ ಯಿನ್ನೆನಾದರು ಜಾಸ್ತಿಯಾಗಿ
೧೨) ಅಪ್ಪಣೆ ಆಗಬೇಕೆಂದು ಯಿ ಮಠದೈಗಳೂ ಹಜೂರ್ರಿ
೧೩) ಗೆ ಬಂದು ಅರಿಕೆಮಾಡಿಕೊಂಡ ಕಾರಣ ಸಾಬಕು ಅ
೧೪) ಪ್ಪಣೆ ಕೊಟ್ಟಿರುವ ಮೇರೆ ನಡಯುವದು ಯಿನ್ನೂರು ವರ ೨೦೦/೦
೧೫) ಹ ಯಿದು ಶಿವಾಯಿ ಹಾಲಿ ಜಾಸ್ತಿ ಕಂಟಿರಾಯಿ ನೂರ
೧೬) ಅರವತು ವರಹ ಯಿಜಾಪೆ ಅಪ್ಪಣೆ ಕೊಟ್ಟು ಯಿರುವದ
೧೭) ರ್ರಿಂದ ಸಂನದು ಸ್ತಳಕೆ ತಲಪಿದ ತಾರ್ರಿಕಿನ ಆರಭ್ಯಾ
೧೮) ಸದರ ಯಿಜಾಪೆ ಐವಜು ಮುಂದೆ ದಾಖಲ ಮಾಡಿ
೧೯) ಸಾಬಕು ನಡಯುತಾ ಯಿದದು ಹಾಲಿ ಯಿಜಾಪಾ ಸು
೨೦) ದಾ ಸಾಲ್ಲಿ ಯಾನಾ ಕಂಟಿರಾಯಿ ಮುಂನ್ನೂರ ಅರವ
೨೧) ವತ್ತು ವರಹದ ಮೇರೆಗೆ ತಾಲೋಕ ಮಜಕೂರ ಐವ
೨೨) ಜ ಪೈಕಿ ನಗದೈವಜಂನ್ನುತ್ತಿಂಗಳಗಟ್ಲೆ ತಪರಿಕು
೨೩) ಮೆರೆಗೆ ಕೊಡುತಾ ಬರೋದು ಯಿದರಲ್ಲಿ ಮಠದ ಖರ್ಚು
೨೪) ಸ್ತಳ ಪರಸ್ತಳದಯಿಂದ ಬಂದ ಗಣಂಗಳು ಮುಂತಾ
೨೫) ಗಿ ಬಂದವರಿಗೆ ಗಣಾರಾಧನೆ ಸಹ ಮಾಡುತ್ತಾ ಸರ
೨೬) ಕಾರದ ಶ್ರೆಯಃ ಪ್ರಾರ್ಥನೆ ಮಾಡುತ್ತಾ ಸುಖದಲ್ಲಿ
೨೭) ಯಿಧಾರು ವರುಷಂ ಪ್ರತ್ತಿ ತಾಜಾ ಸಂನದು ವುಜೂರ
೨೮) ಮಾಡದೆ ಯಿ ಸಂನದಿನ ನಕಲು ಶಿರಸ್ತಾರ ದಪ್ತರಕ್ಕೆ
೨೯) ಬರಶಿ ಅಸಲ ಸಂನದಂನು ಯಿಮಠದೈಗಳ ಜುಂಮೆ

೩೦) ಗೆ ಕೊಡುವದು ತಾರೀಖು ೧೦ನೆ ಮಾಹೆ ಡಿಸಂಬರ್ ಸ್ರ ೧೮೧೬
೩೧) ನೆ ಯಿಸವಿ ಧಾತು ಸಂವತ್ಸರದ ಮಾರ್ಗಶಿರ ಬ ೬ ಮಂ
೩೨) ಗಳವಾರ ಖತ್ತ ಪ್ರಸಂನ್ನೈಯ್ಯ ಮುನಷಿ ಹುಜೂರ್ರು ಸಾಬ
೩೩) ಕ್ಕೂ ಹಲ್ಲು ಸದ್ದು ಸಾಲಿಯಾ
೩೪) ನಾ ಕಂಠೀರಾಯಿ ಮೂನ್ನೂರ್ರು
೩೫) ಅರ್ರುವತ್ತೂ ವರಹಾ ಮೇರಿಗೆ ಕೊ
೩೬) ಡುವದೂ

ಶ್ರೀಕೃಷ್ಣ

---

ಶ್ರೀಕೃಷ್ಣರಾಜ ಒಡೆಯರ್
೧) ಅಮೊಲಾನೆ ಶಿರಸ್ತೆದಾರಾನೆಹಾಲಿ ಯಿಸ್ತಕಾಬಾಲ ಕೊ
೨) ತದ್ದಮಾನೆ ಮುಜಾರಿ ಆ ತಾಲೂಕೆ ನಿಜಗಲ್ಲು ಸರ
೩) ಕಾರದಾರುಲ್ ಆ..ಕ ಮಹಿಶೂರು ಬಿದಾನಂ
೪) ದ ತಾಲೂಕು ಮಜುಕೂರ ಶಿವಗಂಗೆ ಮೇಲಣಗವಿ ಮ
೫) ಠದ ಪಟದ ರಾಚೋಟಿಐ್ಯಗಳಿಗೆ ಸಾಬಕು ಕಚೇ
೬) ರಿ ತಾಕಿತ್ತಿ ಮೇರೆಗೆ ಸಾಬಕು ಕಂಬಾಳು ಶಿವಗಂಗೆ ಬಳಿ ಕಂಟ್ಟಿ
೭) ರಾಯಿ ಹನ್ನೆರಡು ವರಹದ ಜಮೊನು ನಡದು ಬರುವ
೮) ಕಬಾಸ್ತಿ ಹುಟ್ಟುವಳಿಯಿದೆ ಸು ೨೧/೦ ಹುಟ್ಟುವಳಿ ಆ
೯) ಗುತ್ತೆ ಯಿಲ್ಲಿ ಸು ೧೨ ಜಾರಿಯಿಟ್ಟು ಬಾರೆ
೧೦) ವಂಬತ್ತು ವರಹದ ಮೇರೆಗೆ ಸರಕಾರಕ್ಕೆ ಪ್ರತ್ತಿ ಸಂವ
೧೧) ತ್ಸರವು ಗಜೊರಿತೆಗದು ಕೊಳ್ಳುತಾರ್ರೆ ಸದರ್‍ರಿ
೧೨) ಜೋಡಿ ಐವಜು ಮಾಲು ಮಾರಿ ಯಿಪ್ಪತ್ತು ವಂ
೧೩) ದು ವರಹಾ ಜಾರ್ರಿಗೆ ಅಪ್ಪಣೆ ಆಗಬೇಕೆಂದು
೧೪) ಹಜೂರ ಶೃತ ಪಡಿಸಿದರಿಂದ ಅಪ್ಪಣೆ ಕೊ
೧೫) ಟ್ಟು ಯಿದಿತ್ತು ಗವಿಮಠದ ಯಿಂದ ಜೋಡಿ ತ್ತೆ
೧೬) ಗದು ಕೊಳುವದ ಮಾಪು ಮಾಡಿ ಯುವ ಸಂ
೧೭) ವತ್ಸರದ ಲಾಗಾಯಿತ್ತು ಸಾಲಿಯಾನು ಕಂಟ್ಟಿ
೧೮) ರಾಯಿ ಯಿಪ್ಪತುವಂದು ವರಹ ಜಮೀನು ಜಾ
೧೯) ರಿ ನಡಸುವವಕೆ ಅಪ್ಪಣೆ ಕೊಟ್ಟು ಯಿದಿತ್ತೂ
೨೦) ವರಷಂಪ್ರತ್ತಿ ತಾಜಾ ಸಂನದು ವುಜೂರ ಮಾಡದೇ
೨೧) ನಡಶಿಕೊಂಡು ಬರುವದು ಯಿ ವರುಷಾನು



೨೨) ಲಕ್ಷ್ಮೀಪಾಮಾಡಿಕೊಂಡು ಸರಕಾರದ ಶ್ರೇಯಃ ಪ್ರಾ
೨೩) ರ್ಥನೆ ಮಾಡುತ್ತಾ ಸುಖದಲ್ಲಿ ಯಿದಾರ್ರು ವರಷಂ
೨೪) ಪ್ರತಿ ತಾಜಾ ಸಂನದು ವುಜೂರ ಮಾಡದೆ ಯಿೊ ಸಂನದಿ
೨೫) ನ ನಕಲು ತಾಲೊಕದ ಶಿರಸ್ತಾರ ದಪ್ತರಕೆ ಬರೆ
೨೬) ಶಿ ಅಸಲು ಸಂನದು ಮಠದಐಗಳ ಜುಂಮೆ
೨೭) ಗೆ ಕೊಡೋದು ತಾರೀಕು ೨೨ನೆ ಮಾಹೆ ಜನವರ್‍ರಿ ಯು
೨೮) ವ ಸಂವತ್ಸರದ ಪುಷ್ಯ ೫ ಸೋಮವಾರ ೧೮೧೬
೨೯) ನೆಯ್ಸಿವಿ ಖತ ಪ್ರಸನ್ನೈಯ ಮುನಷಿ ಹುಜೂ
೩೦) ರ್ರು ಸದರ್ರಿಲಿ ಮಾಹೆ ಕೊಡಿಶಿ
೨೧) ರ್ರುವ ಮೆರ್ರಿಗೆ ಕಂಟ್ಟಿರಾಯಿ
೩೨) ಯ. ಕೊಂಡ್ಡು ವರಹದ
೩೩) ಜಮನ್ನು ಯಿನಾಮಾಗಿ ನಡಶಿ
೩೪) ಕೊಂಡು ಬರ್ರುವದು ರುಜು
೩೫) ಶ್ರೀಕೃಷ್ಣ

ಕ್ರಿ.ಶ. ೧೮೧೬ರಿಂದ ಶ್ರೀ ಶಿವಗಂಗಾ ಮೇಲಣಗವಿಮಠದ ಸಂಸ್ಥಾನದಲ್ಲಿ ಬಿದಿರಿನ ಕೊಳವೆಯಲ್ಲಿ ರಕ್ಷಿಸಲ್ಪಟ್ಟಿರುವ ಈ ಸುರೂಳಿಯನ್ನು, ಕೋರಿ ಕಾಗದದ ಮೇಲೆ ರಾಗಿಮಸಿಯಲ್ಲಿ ಬರೆದಿರುವ ಈ ದಾಖಲೆಯನ್ನು ಪರ್ಷಿಯನ್, ಮರಾಠಿ, ಕನ್ನಡ ಭಾಷೆಯಲ್ಲಿ ಬರೆದಿದ್ದು, ಈ ಎಲ್ಲಾ ಭಾಷೆಯ ದಾಖಲೆಯ ಅಂತ್ಯದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರವರು ಕನ್ನಡದಲ್ಲಿ ಶ್ರೀಕೃಷ್ಣ ಎಂದು ಸಹಿ ಮಾಡಿದ್ದಾರೆ. ಈ ಅಪರೂಪದ ದಾಖಲೆಯನ್ನು ಪರಿಶೀಲಿಸಲು ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟವರು. ಇಂದಿನ ಶ್ರೀಮದ್ ರಂಭಾಪುರೀ ಜಗದ್ಗುರುಗಳಾದ ಶ್ರೀಮದ್ ರಂಭಾಪುರೀ ವೀರಸಿಂಹಾಸನಾಧೀಶ್ವರ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ಶಿವಾಚಾರ್ಯ ಭಗವತ್ಪಾದರು. ಅಂದು ಹಿರಿಯ ಸ್ವಾಮಿಗಳಾಗಿ ಶಿವಗಂಗೆ ಮೇಲಣಗವಿ ವೀರಸಿಂಹಾಸನದ ಮೇಲೆ ವಿರಾಜಮಾನರಾಗಿದ್ದರು. ಪರಮಪೂಜ್ಯ ಷಟ್‌ಸ್ಥಲ ಬ್ರಹ್ಮ ಶ್ರೀ ಶ್ರೀ ಶ್ರೀ ವಿಶ್ವಾರಾಧ್ಯ ಶಿವಾಚಾರ್ಯರು ಸದ್ಯ ಶಿವಗಂಗೆ ಮೇಲಣಗವಿ ವೀರಸಿಂಹಾಸನದ ಪೀಠಾಧಿಪತಿಗಳಾಗಿರುವ ಶ್ರೀ ಶ್ರೀ ಶ್ರೀ ಷ॥ ಬ್ರ॥ ಮಲಯ ಶಾಂತಮುನಿ ದೇಶೀಕೇಂದ್ರ ಶಿವಾಚಾರ್ಯರು ಈ ಎಲ್ಲಾ ಸ್ವಾಮಿಗಳಿಗೆ ನನ್ನ ಭಕ್ತಿಪೂರ್ವಕ ನಮಸ್ಕಾರಗಳು ಧರ್ಮಪ್ರಭು ಮುಮ್ಮಡಿ ಕೃಷ್ಣರಾಜ ಒಡೆಯರ್ ದಾಖಲೆಯ ಕೆಲವು ಅಕ್ಷರಗಳನ್ನು ನನಗೆ ಓದಲು ಸಾಧ್ಯವಾಗಲಿಲ್ಲ. ಆ ಅಕ್ಷರಗಳನ್ನು ಗುರುತಿಸಿ ಸಹಾಯ ಹಸ್ತವನ್ನು ಚಾಚಿದವರು ಶಾಸನತಜ್ಞ ಡಾ. ಬಿ. ರಾಜಶೇಖರಪ್ಪನವರಿಗೆ ಧನ್ಯವಾದಗಳು.

●

*ಪಂಡಿತ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್. ರಸ್ತೆ,*
*ತುಮಕೂರು-೫೭೨೧೦೨. ಮೊ : ೯೮೮೯ ೯೬೧೯೬*

# ಅಕ್ಕನ ವಚನಗಳ ನಿರ್ವಚನ

ಶ್ರೀ ಬಿದರಹಳ್ಳಿ ನರಸಿಂಹಮೂರ್ತಿ

**ಚಂದ್ರಕಾಂತದ ಶಿಲೆಗೆ ಒಂದುಗಜ ಹೋರುವಂತೆ–**
**ತನ್ನ ನೆಳಲಿಂಗೆ ತಾನೆ ಹೋರಿ ಸಾವಂತೆ ಆನೆಯ ಗತಿ ಆನೆಯ ಮತಿ.**
**ಆನೆಯಹುದು ಆನೆಯಲ್ಲ, ಅದನೇನೆಂಬೆ?**
**ನೀನೆನ್ನ ಕರಸ್ಥಲದಲ್ಲಿ ಸಿಲ್ಕಿದೆಯಾಗಿ ನೀ ನಾನೆಂಬ ಭ್ರಾಂತೇಕೆ?**
**ನಾನು ನೀನಲ್ಲದೆ ತೆರಹಿಲ್ಲ, ಚೆನ್ನಮಲ್ಲಿಕಾರ್ಜುನಾ.**

**(ವ.೧೭೦, ಪು.೫೩, ಶಿವಶರಣೆಯರ ವಚನಸಂಪುಟ, ಸ.ವ.ಸಂ.೫, ಸಂ:ಡಾ.ವೀ.ರಾ, ೧೯೯೩)**

ಇದು ಪೂರ್ಣ ಪ್ರಮಾಣದ ಬೆಡಗಿನ ವಚನವಲ್ಲದಿದ್ದರೂ ಶಬ್ದಾರ್ಥದ ಮೇಲ್ಮೈಗೆ ತುಸು ಬೆಡಗಿನ ಮೆರುಗು ಬಳಿದುಕೊಂಡಂತಿದೆ. ನೀಟಾಗಿ ಬಿಡಿಸಿ ನೋಡಿದರೆ ಇದರ ವೈಚಾರಿಕ ಆಕೃತಿ, ತಾರ್ಕಿಕ ಅರ್ಥ, ತಾತ್ವಿಕ ತಾತ್ಪರ್ಯ ಸ್ಫುಟಗೊಳ್ಳುತ್ತವೆ. ಚಂದ್ರಕಾಂತ ಶಿಲೆಗೆ ತಣ್ಗದಿರ್ಗಲ್ ಎಂಬ ಅಚ್ಚಕನ್ನಡ ಅರ್ಥವಿದೆ. 'ಚಂದ್ರಕಾಂತ ಶಿಲೆಯು ಬೆಳ್ಳಗಿದ್ದು, ರತ್ನಶಾಸ್ತ್ರಜ್ಞರ ಪ್ರಕಾರ ಇದರಲ್ಲಿ ಚಂದ್ರನ ನೆರಳು ಇರುವುದರಿಂದ ಚಂದ್ರನ ಕಿರಣಗಳಿಂದ ಹೆಪ್ಪುಗಟ್ಟಿ ಈ ಶಿಲೆಯಾಗಲು ಕಾರಣ' ಎಂಬ ಪಾರಂಪರಿಕ ವಿಜ್ಞಾನದ ವಿವರಣೆಯೂ ಇದೆ. ಇದು ತಂಪಾದ ಅಮೃತಶಿಲೆ ಸೂಚಕವೊ, ಬೆಲೆಬಾಳುವ ಅದೃಷ್ಟದ ಹರಳಿನ ಸೂಚಕವೊ ಅಥವ ಎರಡೂ ಹೌದೊ ಸ್ಪಷ್ಟವಾಗುವುದಿಲ್ಲ. ಪುಟಾಣಿ ಚಂದ್ರಕಾಂತಮಣಿ ಮೇಲೆ ಸೂರ್ಯಕಿರಣಗಳ ಹಾಯಿಸಿ ಸಣ್ಣ ಕಣ್ಣಾನೆಯ ದೃಷ್ಟಿಬಂಧನ ಮಾಡಿ ನಿಯಂತ್ರಿಸುವ ಬಗ್ಗೆ ಹೇಳುತ್ತಿದೆಯೆ ಈ ವಚನ ಎಂಬುದು ಪ್ರಶ್ನಾರ್ಹ, ಚರ್ಚಾರ್ಹ. ಆದರೆ ದೊಡ್ಡದೊಂದು ಚಂದ್ರಶಿಲಾಖಂಡವನ್ನ ಹಗ್ಗದ ಸಹಾಯದಿಂದ ಎಳೆಯುತ್ತಿರುವ ಆನೆಯ ಚಿತ್ರವೆ ಇಲ್ಲಿ ಅಧಿಕೃತವೆನಿಸತ್ತೆ. ವಿಚಿತ್ರವೆಂದರೆ ಆ ಅಮೂಲ್ಯ ಚಂದ್ರಕಾಂತಶಿಲೆಯ ಸೌಂದರ್ಯ, ತಂಪುಗುಣ, ಆರ್ಥಿಕಮೌಲ್ಯದಿಂದ ಆನೆಗೆ ಯಾವುದೆ ಲಾಭವಿಲ್ಲ. ಬದಲಿಗೆ ಆ ಲಕ್ಷಣಗಳ ಜೊತೆಗೆ ಆ ಶಿಲೆಯ ಭಾರಿತೂಕವೆ ಆನೆಪಾಲಿಗೆ ಶಿಕ್ಷೆಯಂತಾಗುವುದು ಪ್ರಸಂಗವ್ಯಂಗ್ಯ. ನೈಸರ್ಗಿಕ ಶಕ್ತಿಭಂಡಾರದಂತಿರುವ 'ಕರಿ ಘನ', ನಾಗರಿಕತೆಯ ನಿಯಂತ್ರಣಾಸ್ತ್ರ 'ಅಂಕುಶ ಕಿರಿದೆನ್ನಬಹುದೆ?' ಮೇಲಿನ ವಚನದ 'ತನ್ನ ನೆಳಲಿಂಗೆ ತಾನೆ ಹೋರಿ ಸಾವಂತೆ' ಸಾಲು ಸಾಯುವತನಕ ತನ್ನನೆರಳನ್ನು ತಾನೆ ಎಳೆದುಕೊಂಡೊಯ್ವ ಮನುಷ್ಯ ಪ್ರಾಣಿಗೆ ರೂಪಕವೂ, ಆನೆ–ಮನುಷ್ಯನ ಸಮಾನಾಂತರ ಚಿಂತನೆಗೆ ಪ್ರೇರಕವೂ ಆಗಿದೆ. ಮೇಲ್ನೋಟಕ್ಕೆ ಮನುಷ್ಯನ ನೆರಳು ಅನಾಯಾಸ ಅವನನ್ನ ಹಿಂಬಾಲಿಸುತ್ತಿರುವಂತೆ ಕಾಣುತ್ತದೆ. ಆದರೆ ಅವನೆ ಅದನ್ನ ಹೊರಲಾರದೆ ಹೊತ್ತುಕೊಂಡು\ಎಳೆಯಲಾರದೆ ಎಳೆದುಕೊಂಡು ಹೋಗುತ್ತಿಲ್ಲವೆ ಎಂಬ ಸೂಚನೆ ಒಳನೋಟವೂ ಬಿಕ್ಕಟ್ಟಿನ ಪ್ರಶ್ನೆಯೊ ಹೇಳಬರುವಂತಿಲ್ಲ. ಹೋರು ಶಬ್ದಕ್ಕೆ ಹೊರು\ಎಳೆದೊಯ್ಯು\ಹೋರಾಡು



ಎಂಬೆಲ್ಲ ಅರ್ಥಗಳು ಜಿನುಗುತ್ತವೆ. ಆನೆ ಎಳೆಯುತ್ತಿರುವ ಬಿಳಿಶಿಲೆ, ಮನುಷ್ಯಗಂಟಿದ ಕರಿನೆರಳು ಎರಡೂ ಮಾಡಿದ್ದುಣ್ಣೋ ಮಹಾರಾಯ ಎನ್ನುವ ಭೂತಕರ್ಮಗಳ ವರ್ತಮಾನ ಫಲಕ್ಕೊ, ಪೂರ್ವಾರ್ಜಿತ ಕರ್ಮರಾಶಿ ಹಾಗು ಜನ್ಮಾಂತರವಿಧಿ ಕುರಿತ ಕುರುಡು ನಂಬಿಕೆಗೊ ಸಂಕೇತವಾಗುತ್ತವೆಯೆ? ತನ್ನದೇ ದೇಹಭಾರ, ದೇಹದೊಳಗಣ ಹಸಿವು ತೃಷೆಬಾಧೆ, ಕಂಗೆಡಿಸುವ ತಾಪತ್ರಯಗಳ ಹೊರೆಯನ್ನೂ ಧ್ವನಿಸುವಂತಿದೆ ಈ ಸಾಲು. ಅವಕ್ಕೆ ಸೋತು ಶರಣಾದರೆ ಮನುಷ್ಯನಿಗು ಆನೆಗು ಒಂದೇ ಗತಿ. 'ಆನೆಯಗತಿ' ಎಂದರೆ ತನ್ನ ಅಗಾಧ ಗಾತ್ರ, ಅನುಪಮ ಶಕ್ತಿ ನಿರುಪಯುಕ್ತವಾಗಿಸಿ ನಿರರ್ಥಕಪಡಿಸಿಕೊಂಡಿರುವ ಆನೆ ದುರದೃಷ್ಟಖೋಡಿ ಎಂದಲ್ಲವೆ? 'ಆನೆಯ ಮತಿ' ಎಂದರೆ ದೇವರು ಕೊಟ್ಟ ಬುದ್ಧಿಯನ್ನ ಕಿಂಚಿತ್ತೂ ಬಳಸದೆ ತನ್ನ ದೇಹ ಬಲವನ್ನೆಲ್ಲ ಹೆರವರ ಸೇವೆಗೆ ಮೀಸಲಿಟ್ಟ ಮೂರ್ಖ ಮೃಗವೆಂದೆ? ಅಥವ ಆನೆಮತಿಯೆ ಅದರ ಹೀನಾಯ ಗತಿಗೆ, ಬದುಕಿನ ಮಿತಿಗೆ ಕಾರಣವೆಂದೆ? ಆನೆಯಂತೆಯೆ ನರಮನುಷ್ಯನೂ ತನ್ನ ದೇಹ ಮತ್ತು ಮತಿಯ ತಪ್ಪುಬಳಕೆಯಿಂದಲೆ ಈಗಿನ ಅಪೂರ್ಣ ಗತಿಗೆ, ಯಥಾಸ್ಥಿತಿಗೆ ಬಂದು ಬೆಳೆಯದೆ ನಿಂತಿರುವನೆಂದೆ? 'ಆನೆಯಹುದು ಆನೆಯಲ್ಲ, ಅದನೇನೆಂಬೆ' ಸಾಲು ಜಾನಪದ ಒಗಟಿನ ತದ್ರೂಪ. ಅದರ ಸರಳಾರ್ಥ ಆನೆಯಂತೆ ತೋರಿದರೂ ನಿಜವಾದ ಆನೆಯಲ್ಲ ಎಂದು. ಆದರೆ ಮನುಷ್ಯಗು ಆನೆಯ ಗಾತ್ರವಿದೆಯಷ್ಟೆ, ಆನೆಯ ಶಕ್ತಿಸಾಮರ್ಥ್ಯವಿಲ್ಲ ಎಂಬರ್ಥವೂ ಹುದುಗಿದೆ. ಆನೆಯಂತೆ ಬೃಹತ್ತಾಗಿ ಕಾಣುತ್ತಿದ್ದರೂ ನಿಜಾರ್ಥದ ಆನೆಯ ಸಾಮರ್ಥ್ಯವಿಲ್ಲವೆಂಬರ್ಥವೂ ಹೊರಡತ್ತೆ. ಧ್ವನ್ಯಾತ್ಮಕವಾಗಿ ಮನುಷ್ಯ ಸೃಷ್ಟಿಯ ಕಿರೀಟ ನಿಜವಾದರೂ ಸ್ವಂತದ ದೇಹಶಕ್ತಿಯನ್ನಾಗಲಿ ಮನಃಸತ್ವವನ್ನಾಗಲಿ ಸರಿಯಾಗಿ ಸದುಪಯೋಗ ಪಡಿಸಿಕೊಂಡಿಲ್ಲ ಎಂಬಾ ರೋಪವೂ ಇಲ್ಲಡಗಿದೆಯೆ? ಈ ವಚನದ ಭಾವವನ್ನೆ ಹೊರಳಿಸಿಬಿಡುವ ತಿರುವಿನಲ್ಲಿರುವ ಈ ವಿಶಿಷ್ಟ ಪದಗುಚ್ಛ ಥಟ್ಟನೆ ಎಲ್ಲ ನಿಷೇಧಾತ್ಮಕ ಅರ್ಥಗಳನ್ನತ್ತ ಚೆಲ್ಲಿ ಅತ್ಯಂತ ಪಾಸಿಟಿವ್ವಾದ ಒಂದು ಅನುಭಾವಿಕ ರೂಪಕಾರ್ಥ ಕಟ್ಟಿಕೊಡುವಂತೆಯೂ ಕಾಣತ್ತೆ: ಆನೆಗಿಂತಲು ಅಗಾಧ ಗಾತ್ರಿ ವಿಶ್ವರೂಪಿ ಅಥವ ಮಹಾನಿರಾಕಾರಿಶಿವ ಚುಳುಕಾಗಿ ಕರಸ್ಥಳದ ಲಿಂಗವಾಗಿಳಿದಾಗಿನ ಕೃತಜ್ಞತಾ ಭಾವದ ಸೊಲ್ಲಾಗಿ ಕೇಳಿಸಿ ಎದೆಗಣ್ಣಲ್ಲಿ ಆನಂದಬಾಷ್ಪವಾಗಿ ಕಂಗೊಳಿಸತ್ತೆ. 'ಅದನೇನೆಂಬೆ' ಎಂದರೆ ಅದನ್ನಿನ್ನೇನು ಹೇಳಲಿ ಎಂಬ ಕೈಚೆಲ್ಲುವಿಕೆಯೋ, ಅದನ್ನ ಬಿಡಿಸಿಹೇಳಲಾರೆನೆಂಬ ಅಸಹಾಯಕತೆಯೋ ಅಥವ ಅದಿನ್ನೆಂಥ ಚೋದ್ಯ ಎಂಬಚ್ಚರಿಯೋ? 'ನೀನೆನ್ನ ಕರಸ್ಥಲದಲ್ಲಿ ಸಿಲ್ಕಿದೆಯಾಗಿ' ಎಂಬಲ್ಲಿ ಆ ಲಿಂಗಾನುಗ್ರಹದಿಂದಾಗಿ ಸದ್ಯ ನಾ ಗೆದ್ದು ಪಾರಾದೆ ಎಂಬ ಪುಣ್ಯಭಾಜನ ಭಕ್ತಿಭಾವದ ಜೊತೆಗೆ ನನಗಿನ್ನೇನು ಬೇಕು ಎಂಬ ಸಂತೃಪ್ತಿಯೂ, ನನಗಿಷ್ಟೆ ಸಾಕೆಂಬ ಧನ್ಯಭಾವವೂ ಬೆರೆತಿರುವಂತಿದೆ. ಅಲ್ಲದೆ ಅಂಗೈಯಲ್ಲೆ ಆನೆ ಹುದುಗಿದಾಗಿನ ಆಶ್ಚರ್ಯಚಕಿತನ ಸಂಭ್ರಮವೂ ಅಡಗಿದೆ. 'ನೀ ನಾನೆಂಬ ಭ್ರಾಂತೇಕೆ?' ೧. ನಾನು ನೀನು ಬೇರೆಯೆಂಬ ಭ್ರಮೆಯಾಕೆ? ೨. ಉಭಯವಳಿದು ಒಂದಾಗಿರುವ ನಮ್ಮನಡುವೆ ಮತ್ತೆ ದ್ವೈತ ಭಾವವೇಕೆ? ೩. ನೀ ದೊಡ್ಡವ ನಾ ಚಿಕ್ಕವಳೆಂಬ ತಾರತಮ್ಯವೇಕೆ? ೪. ನೀನೆ ಮುಖ್ಯಪ್ರಮಾಣ ನಾ ಅಮುಖ್ಯಳೆಂಬ ಮೇಲರಿಮೆ\ಕೀಳರಿಮೆಗಳೇಕೆ?–ಹೀಗೆ ವಿವಿಧಾರ್ಥ ಹಿಂಡುವ ಸಾಲಿನತುಂಡು. ಆನೆ–ಶಿಲೆ, ತಾನು–ನೆಳಲು ಜೋಡಿನಡುವಿನ ವ್ಯತಿರಿಕ್ತತೆಯಾಗಲಿ ಉಭಯಸಂಕಟವಾಗಲಿ ಶರಣೆ–ಕರಸ್ಥಲಲಿಂಗದ ನಡುವೆ ಸರ್ವಥಾ ಇಲ್ಲವೆಂಬುದು ಗಮನಾರ್ಹ. ಬದಲಿಗೆ ಸುಂದರ ಅದ್ವಯ ಸಮನ್ವಯವಿದೆ. 'ನಾನು ನೀನಲ್ಲದೆ

ತೆರಹಿಲ್ಲ' ಎಂದರೆ ನಾನೆಂಬ ಅಹಂಕಾರದಣು ನೀನೆಂಬ ನಿರಹಂಕಾರ ಮಹಾಸಾಗರದ ಮಹತ್ತಿನಲ್ಲಿ ಕರಗಿಹೋಗಿರುವ ಸುನಿಶ್ಚಿತ ಏಕೋಭಾವದ ಭಕ್ತಿಯಲ್ಲಿ ಉಭಯವಳಿದು ಒಂದಾಗಿ ಹೋಗಿರುವ ಅದ್ವಿತೀಯ ಸಂಬಂಧ. ಹೀಗೆ ತಾನೆ ಚೆನ್ನಮಲ್ಲಿಕಾರ್ಜುನನಲ್ಲಿ ಮಿಳಿತಳಾಗಿರುವ ಅಪೂರ್ವಾನುಭವವ ಎಷ್ಟೆಷ್ಟು ಬಗೆಯಲ್ಲಿ ಎಂತೆಂಥ ಉಪಮೆ ರೂಪಕಗಳ ಮೂಲಕ ಬಣ್ಣಿದರೂ ತೃಪ್ತಿಯಿಲ್ಲ ಅಕ್ಕನಿಗೆ. ಇಂಥ ನಿಸ್ವಾರ್ಥ ಭಾವಾಭಿವ್ಯಕ್ತಿಯಲ್ಲೆ ಜೀವತಾಳತ್ತೆ ಅನುಭಾವಿಗಳಿಗೆಲ್ಲ ಮಾದರಿಯಾಗುವ ಅವಳ ಮಹದನುಭಾವ. ವಿಲೋಮ ವಿವಾಹದ ಆರೋಪ ಹೊರಿಸಿ ಹರಳಯ್ಯ ಮಧುವರಸರನ್ನ ಆನೆಕಾಲಿಗೆ ಕಟ್ಟಿಸಿ ಎಳೆಹೂಟೆ ಶಿಕ್ಷೆವಿಧಿಸಿದ ನಿರಂಕುಷ ಬಿಜ್ಜಳ ಪ್ರಭುತ್ವ ಕಣ್ಣಾರೆ ಕಂಡಿರಲಿಕ್ಕಿಲ್ಲ ಅಕ್ಕ. ಆ ಹೊತ್ತಿಗಾಗಲೆ ಅವಳು ಅಲ್ಲಮನಾಣತಿಯಂತೆ ಸಕ್ಷೇಮ ಸುಕ್ಷೇತ್ರ ಶ್ರೀಶೈಲ ತಲುಪಿದ್ದಳೆನಿಸತ್ತೆ. ಆದರೂ ಈ ವಚನದ ವಸ್ತುಚಿತ್ರ ಅಕಸ್ಮಾತ್ತೆಲ್ಲೊ ಚಂದ್ರಕಾಂತ ಶಿಲೆ ಎಳೆದೊಯ್ಯುತ್ತಿದ್ದ ಆನೆಯಿಂದ ಪ್ರೇರಿತವಾಯಿತೊ ಅಥವ ಕರ್ಣಾಕರ್ಣಿಕೆಯಾಗಿ ಕೇಳಿದ್ದಿರಬಹುದಾದ ಕಲ್ಯಾಣದ ಘನಘೋರ ಘಟನೆಯ ಸಾಂಕೇತಿಕ ಸೂಚನೆಯನ್ನೇ ನಾದರೂತನ್ನೊಡಲಲ್ಲಿ ಅಡಗಿಸಿಕೊಂಡಿದೆಯೊ ಎಂಬುದು ಕುತೂಹಲಿ ಮನದ ದೂರಾನ್ವಯ ಪ್ರಶ್ನೆ. ಚಾತುರ್ವರ್ಣ ವ್ಯವಸ್ಥೆ ಒಳಗಿದ್ದ ಮಧುವರಸ ಹಾಗು ಅದರ ಹೊರಗಿದ್ದ ಪಂಚಮಹರಳಯ್ಯರದು ಚಂದ್ರಕಾಂತಶಿಲೆಯಷ್ಟೆ ತಂಪಾದ ತಿಳುವಳಿಕೆಯುಳ್ಳ, ಅಷ್ಟೆ ತೂಕವುಳ್ಳ ಆಧ್ಯಾತ್ಮಿಕ ಸಾಧನೆಯ, ಸಾಮಾಜಿಕವಾಗಿ ಅಷ್ಟೆ ಬೆಲೆಬಾಳುವ ಆತ್ಮ ಎಂಬುದರಲ್ಲಿ ಎರಡು ಮಾತಿಲ್ಲ. ತಿಳಿದೊ ತಿಳಿಯದೆಯೊ ಹಿಂಸಾರತಿಯ ಪ್ರಾತ್ಯಕ್ಷಿಕೆಯಂತೆ ಅಂಥವರನ್ನೆಳೆದೊಯ್ದ ಆ ಪಟ್ಟದಾನೆ ರಾಕ್ಷಸಾಡಳಿತದ ಜ್ವಲಂತ ಪ್ರತಿಮೆಯಂತೆ ಒಳಗಣ್ಣಿಗೆ ಕಂಡೀತೆ? ಶರಣರನ್ನ ಕ್ರೂರವಾಗಿ ಕೊಲ್ಲಿಸಹೊರಟ ಬಿಜ್ಜಳ ಚಾರಿತ್ರಿಕ ಹಿನ್ನೋಟದಲ್ಲಿ ತನ್ನ ಪಾಪದ ನೆರಳ ತಾನೆ ಹೊರಲಾರದೆ ಹೊತ್ತೊಯ್ದು ಸತ್ತುಬಿದ್ದಂತೆ ಭಾಸವಾಗನೆ?

●

*'ಅನಿಮಿಷ', ಕ್ರಾಸ್-೭, ದುರ್ಗಿಗುಡಿ ಹಂತ ೧, ಹೊನ್ನಾಳಿ – ೫೭೭ ೨೧೭*
*ದಾವಣಗೆರೆ ಜಿಲ್ಲೆ ೯೮೮೦೧ ೩೦೨೦೩*

ಶಿಲೆಯೆಂಬ ಪೂರ್ವಾಶ್ರಯವ ಕಳೆದು ಲಿಂಗವೆಂದ
ನರನೆಂಬ ಪೂರ್ವಾಶ್ರಯ ಕಳೆದು ಗುರುವೆಂದ
ಜಾತಿ ಸೂಚಕದ ಪೂರ್ವಾಶ್ರಯವ ಕಳೆದು ಜಂಗಮವೆಂದ
ಎಂಜಲೆಂಬ ಪೂರ್ವಾಶ್ರಯವ ಕಳೆದು ಪ್ರಸಾದವೆಂದ
ಇಂತೀ ಚತುರ್ವಿಧ ಪೂರ್ವಾಶ್ರಯವ ಕಳೆಯ ಬಲ್ಲನಾಗಿ
ಕೂಡಲಚೆನ್ನಸಂಗಯ್ಯನಲ್ಲಿ ಶರಣ ಸ್ವತಂತ್ರ

– ಚೆನ್ನಬಸವಣ್ಣ





## ಉಲಿ

**ಡಾ. ಓ.ಎಲ್. ನಾಗಭೂಷಣಸ್ವಾಮಿ**

ಭಾಷೆಯಲ್ಲಿ ಯಾವ ಪದವೂ ಇನ್ನೊಂದು ಪದದ ಅರ್ಥವನ್ನು ತಿಳಿಸುವ 'ಸಮಾನಪದ' ಅಲ್ಲವೇ ಅಲ್ಲ. ಪ್ರತಿಯೊಂದು ಪದದ ಅರ್ಥ ಭಾವದಲ್ಲಿ ಒಂದಿಷ್ಟು ವ್ಯತ್ಯಾಸ ಇದ್ದೇ ಇರುತ್ತದೆ. ಹಾಗೆಯೇ ಯಾವ ಪದವೂ ಇನ್ನೊಂದು ಪದದ 'ವಿರುದ್ಧ' ಪದವೂ ಅಲ್ಲ. ಪದಗಳ ಅರ್ಥ ವಿರುದ್ಧವೆಂಬ ಕಲ್ಪನೆ ನಮ್ಮ ಮನಸ್ಸಿನದು, ಭಾವನೆಯದು, ತಿಳಿವಳಿಕೆಯದು. ಇನ್ನೊಂದು ಸಂಗತಿ ಎಂದರೆ ಪದದ ಅರ್ಥವೆನ್ನುವುದು ಅದು ಬಳಕೆಯಾಗುವ ಸಂದರ್ಭದಲ್ಲಿ ಸ್ಪಷ್ಟವಾಗುತ್ತದೆ, ಅಂದರೆ ವಾಕ್ಯ ಸಮೂಹಗಳಲ್ಲಿ ಅರ್ಥವಿರುತ್ತದೆಯೇ ಹೊರತು ಬಿಡಿಯಾದ ಪದಗಳಲ್ಲಿ ಅಲ್ಲ. ಬಿಡಿಯಾದ ಪದ 'ಕಾಳು', ಮಿಕ್ಕ ಪದ, ವಿಭಕ್ತಿ, ಪ್ರತ್ಯಯ, ಸಂದರ್ಭಗಳ ಕೂಟದಿಂದ ಮೊಳೆತು ಅರ್ಥದ ಬೆಳೆಯಾಗುತ್ತದೆ. ಇನ್ನು ಮುಂದಿನ ಕೆಲವು ಬರಹಗಳಲ್ಲಿ ವಚನಕಾರರು ಭಾಷೆಯನ್ನೇ ಕುರಿತು ನಡೆಸಿದ ಚಿಂತನೆಯ ಪರಿಚಯ ಮಾಡಿಕೊಳ್ಳಲು ಯತ್ನಿಸಿದ್ದೇನೆ.

ಉಲಿ, ನುಡಿ, ಶಬ್ದ, ಮಾತು, ವಚನ, ಭಾಷೆ ಇವೆಲ್ಲವೂ ಹಾಗೆ ಪರಸ್ಪರ ಸಂಬಂಧ ಇರುವಂಥವು, ನುಡಿತೆನೆಯ ಕಾಳುಗಳು. ಈ ಬಾರಿ ಉಲಿಯನ್ನು ಕೇಳೋಣ, ನೋಡೋಣ.

ಉಲಿ ಎಂಬುದು ಬರಿಯ ಸದ್ದು, ಅರ್ಥವಿರದ ಸದ್ದು. ತತ್ವಜ್ಞನೊಬ್ಬ ಹೇಳುತ್ತಾನೆ 'ಜ್ಞಾನಕ್ಕೆ ವಿರುದ್ಧವಾದ ಸ್ಥಿತಿ ಅಜ್ಞಾನವಲ್ಲ, ಸದ್ದು!' ಅವನು ಬಳಸುವ ಪದ ಇಂಗ್ಲಿಶಿನ್ ನಾಯ್ಸ್ ಎಂಬುದು. ಅಲ್ಲವೇ! ಜ್ಞಾನವೆನ್ನುವುದು ವ್ಯವಸ್ಥಿತವಾದ, ಅರ್ಥಭರಿತವಾದ ನುಡಿ ಸಮೂಹ. ಸಂಗೀತವೂ ಅಷ್ಟೇ, ಲಯ ತಾಳ ಬದ್ಧವಾದ ನಾದ. ಉಲಿ ಅನ್ನುವುದು ಯಾವುದೇ ಜೀವಿ ತನ್ನ ಇರುವಿಕೆಯನ್ನು ವ್ಯಕ್ತಪಡಿಸುವ ತನ್ನಷ್ಟಕ್ಕೇ ಅರ್ಥವಿರದ ಸದ್ದು ಅನ್ನುವುದಿರಬಹುದು. ಬರಿಯ ಸದ್ದು ಇರುವಲ್ಲಿ ದಿಕ್ಕುತಪ್ಪುತ್ತದೆ. ಅದಕ್ಕೇ ಬಂದಿದೆ ಈ ಮಾತು: 'ಉಲಿವ ಮರದ ಪಕ್ಷಿಯಂತೆ, ದೆಸೆದೆಸೆಯನಾಲಿಸುತ್ತಿರ್ದೆ/ ಅರಿವರಿಲ್ಲ ಅರಿವರಿಲ್ಲ ಅರಿದು ಮರೆಯಿತ್ತಯ್ಯಾ.' [೨.೬೬೬] ಬದುಕೊಂದು ಸದ್ದಿನ ಮರ. ಎತ್ತ ತಿರುಗಿದರೂ ಕಿವಿಗೊಟ್ಟರೂ ಬರೀ ಸದ್ದು. ಅದು ಅರಿವಲ್ಲ, ಬಗೆ ಬಗೆಯ ಹಕ್ಕಿಗಳ ಉಲಿಯ ಗದ್ದಲ.

'ಉಲಿಗರ ಮಾತು, ಊರುಗರ ತೋಟಿಯೊಳಗುಂಟೆ ಲಿಂಗಾನುಭಾವ?... ಬೀದಿಯ ಮಾತಿನೊಳಗುಂಟೆ ಲಿಂಗಾನುಭಾವ?... ಅನುಭಾವ ಹೊರವೇಷದ ವಾಚಾಳರಿಗೆಲ್ಲಿಯದು' ಅನ್ನುವ ಪ್ರಶ್ನೆ [೩.೩೪೦] ಚನ್ನಬಸವಣ್ಣನವರದ್ದು. 'ಉಲಿವ ತರುವಲಿಗಳೆಲ್ಲ ಗಿಳಿವಿಂಡುಗೆಡೆದಿಹರು ಅರಿಯದ ಮೌನಿಯ ಮುಕ್ತಿಯಿದೇನೊ' [೨.೯೬೫] ತರುವಲಿ ಎಂದರೆ ಅರಿವಿಲ್ಲದ ಬಾಲಕ. ಯಾರು ಸುಮ್ಮನೆ ಮಾತಾಡುತ್ತಾರೋ ಅವರೆಲ್ಲ ಗಿಳಿಯ ಹಿಂಡಿನ ಹಾಗೆ ಒಂದೇ ಸಮ ಸದ್ದು ಮಾಡುವವರು ಅನ್ನುವ ಮಾತು ವಚನಗಳನ್ನು ಕುರಿತು ಮಾತಾಡುವ, ಬರೆಯುವ ನಮ್ಮಂಥವರನ್ನೇ ವಿವರಿಸುವ ಹಾಗಿದೆಯಲ್ಲವೇ? ಮಾತಿನ ಉಲಿ ಹೆಚ್ಚಾದಷ್ಟೂ ಬಿಡುಗಡೆ ಅಸಾಧ್ಯ. ಮೌನವೇ ಬಿಡುಗಡೆ ಅನ್ನುವ ತುಟ್ಟತುದಿಯ ನಿಲುವು ಇಲ್ಲಿದೆ. ಯಾಕೆ ಈ ನಿಲುವು?

ಉತ್ತರ ವಚನಗಳಲ್ಲೇ ಇದೆ. 'ಜ್ಞಾನಕೊಬ್ಬಿನಲಿ ಉಲಿವೆ' [೨.೧೦೫] ನಾನೂ ಬಯಲಾಗುವುದಿಲ್ಲ, ನೀನೂ ಬಯಲಾಗುವುದಕ್ಕೆ ಬಿಡುವುದಿಲ್ಲ ಅನ್ನುವ ನೋವಿನ ಅರಿವೂಇದೆ. ಜ್ಞಾನ ಹೆಚ್ಚಾದಷ್ಟೂ ಮಾತಿನ ಕೊಬ್ಬು ಹೆಚ್ಚುತ್ತದೆ ಅನ್ನುವುದನ್ನು ಸುಂದರ ಚಿತ್ರಗಳಾಗಿಯೂ ವಿವರಿಸಿದ್ದು ಇದೆ. ಕುರಿಯ ಹಿಂಡು ಕಬ್ಬಿನ ತೋಟಕ್ಕೆ ನುಗ್ಗಿ, ಸರಪರಸದ್ದು ಮಾಡಿ ಉಲಿಯುವ ಎಲೆಗಳನ್ನಷ್ಟೇ ತಿಂದವು, ಕಬ್ಬಿನ ರುಚಿ ನೋಡಲಿಲ್ಲ ಅನ್ನುವುದು ಅಂಥ ಒಂದು ಚಿತ್ರ [೧.೫೯೭]. ನೀರಿನ ಕೊಡವನ್ನು ಹೊತ್ತಗೊರವಿ ಉರಿಯ ಗೊರವನನ್ನು ಖಂಡಿತ ಸೇರುತ್ತೇನೆ ಎಂದು ಬಂದರೆ ಅವಳ ಕೈಯ ಕಂಕಣ, ಕಾಲ ಗೆಜ್ಜೆ ಉಲಿದು ಸದ್ದು ಮಾಡುತ್ತಿರುವಾಗ

ಹೆಜ್ಜೆ ಹೆಜ್ಜೆಗೆ ಮುಳ್ಳೆದ್ದು ಅವನನ್ನು ಸೇರಲು ಸಾಧ್ಯವಾಗಲೇ ಇಲ್ಲ. ಆಭರಣಗಳ ಉಲುಹು ಇಲ್ಲವಾಗಿ, ಕಣ್ಣುತೆರೆದು ಮುಳ್ಳಿಲ್ಲ ಇಲ್ಲವಾದಾಗ ಗೊರವನ ನೆರೆದಳು ಅನ್ನುವ ಚಿತ್ರವೂ ಇದೆ. [೨.೯೫೪] 'ಕೈಯದುಕುರುಹು, ಬಾಯದು ಬೊಬ್ಬೆ, ಉಲಿಯದಿರೋ ಭಾವ, ಉಲಿಯದಿರೋ ಭಾವ' [೫.೧೧೧೯] ಅನ್ನುವುದು ಮುಕ್ತಾಯಕ್ಕನವರ ಕೋರಿಕೆ. 'ಕಂಡೆವೆಂದು ಉಲಿಯಬೇಡ' [೯.೯೫೯] ಎಂಬುದು ಹಡಪದ ಅಪ್ಪಣ್ಣನವರ ಎಚ್ಚರಿಕೆ. 'ಕಲಿಕಲಿತು ಉಲಿವ ಅಭ್ಯಾಸದ ಮಾತಿಂಗೆ ಮರುಳಪ್ಪರೆ ನಮ್ಮ ಶಿವಶರಣರು' [೬.೧೧೯೫] ಇದು ಆದಯ್ಯನವರ ಮಾತು. ಅನುಭವದಲ್ಲಿ ಬೇರು ಬಿಟ್ಟು, ಮನದಿಂದ ಹೊಮ್ಮಿದ ಮಾತುಯಾವುದು ಕಲಿತು ಆಡುವ ಉಲಿ ಯಾವುದು ಅನ್ನುವುದನ್ನು ಶಿವಶರಣರಲ್ಲ, ಸಾಮಾನ್ಯರು ಕೂಡ ಅರಿಯದಿದ್ದರೆ ಭಾಷಣಕೋರರೆಲ್ಲ ಮಹಾತ್ಮರಾಗಿ ಪೂಜೆಗೊಳ್ಳುವ ದುರಂತ ತಪ್ಪದು.

ಉಲಿಗೆ ಇನ್ನೊಂದು ಮುಖವೂ ಇದೆ. ಬೀಜದೊಳಗೆ ಅಡಗಿರುವ ಮರ ಮರ್ಮರ ಸದ್ದು ಮಾಡದು. ರತ್ನದೊಳಗೆ ಬೆಳಕು ಇದ್ದರೂ ಅದು ಉರಿಯಾಗಿ ಇನ್ನೊಂದು ದೀಪವನ್ನು ಬೆಳಗಲಾಗದು. ಗೋಡೆಯ ಮೇಲೆ ಬರೆದ ಚಿತ್ರ ರಸ್ತೆಗಿಳಿದು ಓಡಾಡಲಾರದು ಅನ್ನುವ ಚಿತ್ರಗಳನ್ನು ರೂಪಿಸಿದ್ದಾರೆ ಮೋಳಿಗೆ ಮಾರಯ್ಯನವರು [೮.೧೯೯೫] 'ಮರನುಳ್ಳನ್ನಕ್ಕ ಎಲೆ ಉಲಿವುದು ಮಾಬುದೆ? ಶರೀರವುಳ್ಳನ್ನಕ್ಕ ವಿಕಾರ ಮಾಬುದೆ? [೨.೪೪೫]' ಮರ ಇರುವವರೆಗೆ ಎಲೆಯ ಮರ್ಮರ ನಿಲ್ಲುವುದಿಲ್ಲ, ಶರೀರ ಇರುವವರೆಗೆ ವಿಕಾರವೂ ತಪ್ಪುವುದಿಲ್ಲ ಅನ್ನುವ ನಿಜದ ಮಾತೂ ಇದೆ. ಉಲಿ ಅನ್ನುವುದು ನಾವು ಜೀವಂತ ಇರುವುದರ ಕುರುಹು. ಜೀವಂತವಾಗಿ ಇರುವುದೆಂದರೆ ಪರ-ವಿರುದ್ಧಗಳ, ಒಳಿತು-ಕೆಡುಕುಗಳ ನಡುವೆ ತುಯ್ದಾಡುವ, ಹೆಣಗಾಡುವ, ಹೋರಾಡುವ ದಂದುಗ. ಯಾಚನೆ, ಕೋರಿಕೆ, ವ್ಯಥೆ, ಆಕ್ರೋಶ, ಕೊಬ್ಬು, ಸಿಟ್ಟು, ಒಲವು ಒಮ್ಮೆ ಅತ್ತ, ಒಮ್ಮೆ ಇತ್ತ ಯಾವುದೇ ಒಂದು ತುದಿಯನ್ನು ಮುಟ್ಟದೆ ತೂಗುತ್ತಲೇ ಇರುವುದು ಜೀವದ ವಿಧಿಯೇ

ಬದುಕು ಉಲಿಯ ಉಯ್ಯಾಲೆ. ಈ ಉಯ್ಯಾಲೆಯನ್ನು ಹೇಗೆ ತೂಗಬೇಕು ಎಂದರೆ ಭವಸಾಗರ ಮತ್ತೆ ಬರದ ಹಾಗೆ ಆ ತುದಿಗೆ ಹೋಗಿಬಿಡಬೇಕು. ಈ ಉಯ್ಯಾಲೆಯ ಮೇಲೆ ಹಂಸ ಕೂತಿದೆ, ತೂಗುತ್ತಿದೆ. ಆ ಹಂಸದ ಮೇಲೆ ತುಂಬಿ ಸ್ವರ ಮಾಡುತ್ತಿದೆ. ಅದು ಗುಹೇಶ್ವರನ ಸ್ವರದ ಪ್ರತಿರೂಪ. ಅದು ಏನೆಂದು ತಿಳಿಯುವುದಕ್ಕೆ ಉಲಿಯದೆ ಇರಲಾರದ ದೇಹ ಉಳ್ಳವರಿಗೆ ಸಾಧ್ಯವಾಗದು. ಉಲುಹಳಿಯುವುದು ಎಂದರೆ ಪರ-ವಿರೋಧಗಳನ್ನು ಇಲ್ಲವಾಗಿಸಿ ಸಮರಸವಾಗಿಮ 'ಸರಕಡಿಯದೆ' ಸ್ವರ ಕತ್ತರಿಸಿ ಅಪರಸ್ವರವಾಗದೆ ಬದುಕುವುದೇ ಇರಬಹುದು. ಜೀವನ ಜೋಕಾಲಿಯ ಈ ಅದ್ಭುತವಾದ ರೂಪಕದ ಮೂಲಕ ಉಲಿ-ಭಾಷೆ-ಆಧ್ಯಾತ್ಮ-ವಿರೋಧಗಳು ಇಲ್ಲವಾಗಿ ಮೌನವಾಗಿ ಇರುವ ಬಯಕೆ ಎಲ್ಲವೂ ವ್ಯಕ್ತವಾಗಿದೆ ಈ ವಚನದಲ್ಲಿ.

**ಉಲಿವ ಉಯ್ಯಾಲೆಯ ಹರಿದು ಬಂದೇರಲು**
**ತಾಗದೆ ತೂಗುವುದು ಭವಸಾಗರ ಮರಳಿ ಬಾರದಂತೆ**
**ಹಂಸೆಯ ಮೇಲೆ ತುಂಬಿ ಕುಳ್ಳಿರ್ದು ಸ್ವರಗೆಯ್ಯುವ ಘೋಷವಿದೇನೊ**
**ಆತನಿರ್ದ ಸರ ಹರಿಯದೆ ಇದ್ದಿತ್ತು**
**ದೇಹಿಗಳೆಲ್ಲ ಅರಿವರೆ, ಗುಹೇಶ್ವರನಆಹಾರಮುಖವ [೨.೨೪೧]**

ಉಲಿ ಅಂದರೆ- ಮರ್ಮರ, ಸದ್ದು, ಜೀವಿಯ ಕುರುಹು, ಮನುಷ್ಯನ ಅಹಂಕಾರ, ತನಗಿಂತ ದೊಡ್ಡದಾಗಿರುವುದರೊಡನೆ ಬೆರೆತು ಒಂದಾಗಲು ಬಿಡದ ಕೊಬ್ಬು, ಉಲಿವ ವೃಕ್ಷದ ಗದ್ದಲದಲ್ಲಿ ನನ್ನನ್ನು ಅರಿವವರಿಲ್ಲ ಅನ್ನುವ ಕೊರಗು, ಉಲುಹಳಿದು ಸರ ಹರಿಯದೆ ಇರಲಿ ಅನ್ನುವ ಹಾರೈಕೆ, ಇದರ ಬೇರೆ ಮುಖಗಳನ್ನು ಮುಂದಿನ ಶಬ್ದ ಎಂಬ ಬರಹದಲ್ಲಿ ನೋಡೋಣ.

●

*ನಂ.೪೪೫, ಆನಂದ ನಿಲಯ, ೮ನೆಯ ಮೇನ್, ಸರಸ್ವತಿಪುರಂ, ಮೈಸೂರು - ೫೭೦ ೦೦೯*
*ಮೊ: ೯೪೮೦೩ ೭೯೮೩೭*



## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೨೩ರ ಸರಿಯುತ್ತರಗಳು

೧. (ಇ) ಡಾ.ಎಂ.ಎಂ. ಕಲಬುರ್ಗಿ ೨. (ಇ) ಬತ್ತಲೇಶ್ವರನ ಪುಣ್ಯಸ್ತ್ರೀ ಗುಡ್ಡವ್ವೆ ೩. (ಆ) ಬಹುರೂಪಿ ಚೌಡಯ್ಯ ೪. (ಅ) ಅರಿವಿನ ಮಾರಿತಂದೆ ೫. (ಈ) ಮಾಂಸ

'ಮಹಾಮನೆ'ಯ ಹಲವಾರು ಓದುಗರು "ವಚನ ರಸಪ್ರಶ್ನೆ-೨೩"ರ ಉತ್ತರಗಳನ್ನು ಕಳಿಸಿದ್ದಾರೆ. ಅವುಗಳಲ್ಲಿ ಲಾಟರಿ ಎತ್ತುವ ಮೂಲಕ ಆಯ್ಕೆಯಾದ ಇಬ್ಬರು ವಿಜೇತರ ಹೆಸರುಗಳು ಇಂತಿವೆ.

**೧. ಶ್ರೀಮತಿ ಗಿರಿಜಾ ಅ. ಪಾವಟೆ, ಬಾಗಲಕೋಟೆ ಜಿಲ್ಲೆ**
**೨. ಶ್ರೀ ಕೌಶಿಕ ಕೆ.ಬಿ., ಬಳ್ಳಾರಿ ಜಿಲ್ಲೆ**

### ವಚನ ರಸಪ್ರಶ್ನೆ -೨೪ರ ಪ್ರಶ್ನೆಗಳು

**೧. 'ಕರ್ತಾರನ ಕಮ್ಮಟ' - ಕೃತಿಯ ಲೇಖಕರು ಯಾರು?**
(ಅ) ಡಾ. ಎಲ್. ಬಸವರಾಜು (ಆ) ಡಾ.ಎಚ್. ತಿಪ್ಪೇರುದ್ರಸ್ವಾಮಿ
(ಇ) ಬಿ. ಪುಟ್ಟಸ್ವಾಮಯ್ಯ (ಈ) ಪ್ರೊ. ಎಸ್.ಜಿ. ಸಿದ್ಧರಾಮಯ್ಯ

**೨. ಎಂ.ಆರ್. ಶ್ರೀನಿವಾಸಮೂರ್ತಿಯವರು ರಚಿಸಿದ ಕೃತಿಯ ಹೆಸರು:**
(ಅ) ವಚನಧರ್ಮಸಾರ (ಆ) ವಚನಗಳಲ್ಲಿ ಗಣಿತ
(ಇ) ವಚನ ವಿವೇಕ (ಈ) ಶರಣ ಸಾಹಿತ್ಯ

**೩. ಹೊಲೆಯ ಹೊಲೆಯನೆಂದು ಹೊರಗಿರು ಎಂದೆಂಬರು - ಎನ್ನುವ ಸಾಲು ಯಾರ ವಚನದಲ್ಲಿ ಬರುತ್ತದೆ?**
(ಅ) ಮೆರೆಮಿಂಡಯ್ಯ (ಆ) ಅಕ್ಕಮಹಾದೇವಿ
(ಇ) ಚೆನ್ನಬಸವಣ್ಣ (ಈ) ಮೋಳಿಗೆ ಮಾರಯ್ಯ

**೪. "ಚಂದೇಶ್ವರ ಲಿಂಗ" ಎಂಬುದು ಯಾರ ಅಂಕಿತ ನಾಮ?**
(ಅ) ಆಯ್ದಕ್ಕಿ ಮಾರಯ್ಯ (ಆ) ಸಿದ್ಧರಾಮ
(ಇ) ಮಾದಾರ ಚೆನ್ನಯ್ಯ (ಈ) ನುಲಿಯ ಚಂದಯ್ಯ

**೫. ಈರೇಳು ಎಂದರೆ**
(ಅ) ಹದಿನಾಲ್ಕು (ಆ) ಏಳು
(ಇ) ಇಪ್ಪತ್ತೇಳು (ಈ) ಹದಿನೇಳು

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, "ವಚನ ರಸಪ್ರಶ್ನೆ", ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.**

# ಅಗಣಿತ

## ಡಾ. ಅಮರೇಶ ನುಗಡೋಣಿ

**ಇವನಾರವ ಇವನಾರವ ಇವನಾರವನೆಂದೆನಿಸದಿರಯ್ಯ**
**ಇವನಮ್ಮವ ಇವನಮ್ಮವ ಇವನಮ್ಮವನೆಂದೆನಿಸಯ್ಯಾ**
**ಕೂಡಲ ಸಂಗಮದೇವಾ, ನಿಮ್ಮ ಮನೆಯ ಮಗನೆಂದೆನಿಸಯ್ಯ**
**– ಬಸವಣ್ಣ**

ಇವನಾರವ? ಇವ ನಮ್ಮವನಲ್ಲ! ಎಂಬ ಮಾತು ಸಮಾಜದಲ್ಲಿ ಚಾಲ್ತಿಯಲ್ಲಿತ್ತು. ಜನ ಸಮುದಾಯಗಳ ಸಮಾಜವನ್ನು ವಿಭಾಗಿಸಿ, ಕೆಲವರನ್ನು ನಮ್ಮವರು ಎಂದು ಇದೆ. ಕರೆದುಕೊಂಡು, ಇನ್ನು ಅನೇಕರನ್ನು ನಮ್ಮವರಲ್ಲ ಎಂದು ಘೋಷಿಸಿದ್ದ ಕಾಲದಲ್ಲಿ ಬಸವಣ್ಣನ ಮೇಲಿನ ವಚನ ರಚನೆಯಾಗಿದೆ. ವಚನ ಸರಳವಾಗಿದೆ. ಸಂದರ್ಭ ಸರಳವಾಗಿರಲಿಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ಸಮಾಜಗಳಿದ್ದವಷ್ಟೆ. ಮೊದಲ ಮೂರು ಸಮಾಜಗಳು ಹೊಂದಾಣಿಕೆ ಮಾಡಿಕೊಂಡು ತಲೆ ಎತ್ತಿ ಬದುಕುತ್ತಿದ್ದವು ಮತ್ತು ಈ ಮೂರು ಸಮಾಜದ ಜನರು ನಾಲ್ಕನೆಯ ಸಮಾಜವನ್ನು ಕನಿಷ್ಠ ಸಹನೆಯಿಂದಲೂ ನೋಡುತ್ತಿರಲಿಲ್ಲ. ಶೂದ್ರರ ಪರಿಸ್ಥಿತಿ ಹೇಗಿತ್ತೆಂದು ಚರಿತ್ರೆಯನ್ನು ಬಲ್ಲವರಿಗೆ ಹೇಳಬೇಕಾಗಿಲ್ಲ. ಈ ಶೂದ್ರರನ್ನು ಮುಖ್ಯವಾಹಿನಿಗೆ ತರುವುದು ಬಸವಣ್ಣನ ಆದ್ಯ ಗುರಿಯಾಗಿತ್ತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಸಮಾಜಗಳ ಪರಂಪರೆಯನ್ನೇ ಖಂಡಿಸುತ್ತ, ಬಸವಣ್ಣ ಶೂದ್ರರಿಗಿದ್ದ ಕಳಂಕಗಳನ್ನು ತೊಳೆದು ಶರಣರನ್ನಾಗಿ ಪರಿವರ್ತಿಸುತ್ತ, ಮೇಲ್ವರ್ಗಗಳಿಗೆ ವಿನಯದಿಂದ 'ಇವನಾರವ?' ಎಂದು ಕೇಳದೆ, 'ಇವನಮ್ಮವ' ಎಂದು ತಿಳಿಯಿರಿ. ಹೀಗೆ ಬಸವಣ್ಣ ಬೇಡಿಕೊಂಡಿರಬೇಕು ಎಂದು ಅರಿಯಲು ಸಾಧ್ಯವಾಗುತ್ತದೆ.

ಬ್ರಾಹ್ಮಣರಲ್ಲಿ ಉಪಜಾತಿಗಳಿವೆ. ಕ್ಷತ್ರಿಯರಲ್ಲಿ, ವೈಶ್ಯರಲ್ಲಿಯೂ ಇರಬೇಕು. ಉಪಜಾತಿಗಳ ಒಳಗಿರುವ ಸಂಘರ್ಷ, ಸಾಮರಸ್ಯದ ಸ್ವರೂಪ ಹೇಗಿರಬಹುದು? ಎಂಬ ಅಧ್ಯಯನಗಳು ನಡೆದಿರಬಹುದು. ಶೂದ್ರರಲ್ಲಿ ಒಳ ಜಾತಿಗಳು ನೂರಾರಿರಬೇಕು. ದುಡಿಯುವ ವರ್ಗವಿದು. ವೃತ್ತಿನಿರತರು ಆಗಿದ್ದರು. ಬಸವಣ್ಣ ಈ ಶೂದ್ರರ – ಕೆಳವರ್ಗದವರ ವೃತ್ತಿಗಳನ್ನು ಬಲ್ಲವನಾಗಿದ್ದ. ಆದರೆ ಸಮಾಜದಲ್ಲಿ ಈ ವರ್ಗದ ವೃತ್ತಿಗಳಿಗೆ ಗೌರವವಿರಲಿಲ್ಲ. ಆದರೆ ಇವರ ವೃತ್ತಿಗಳು, ದುಡಿಮೆಗಳು ಸಮಾಜವನ್ನು ಎತ್ತಿ ಹಿಡಿದಿದ್ದವು. ಅಂದರೆ ಸಮಾಜದ ಬುನಾದಿಯಾಗಿ ನಿಂತಿದ್ದರು. ಶೂದ್ರರೂ, ಇವರ ಅಗತ್ಯ ಸಮಾಜಕ್ಕೆ ಬೇಕಿದ್ದರೂ, ದುಡಿಸಿಕೊಂಡು ದೂರವಿಟ್ಟಿದ್ದರು. ಶೂದ್ರರ ಶಕ್ತಿ ದುಡಿಮೆಯಲ್ಲಿತ್ತು ಎಂಬುದನ್ನು ಅರಿತ ಬಸವಣ್ಣ ಎಲ್ಲ ದುಡಿಯುವ ವರ್ಗವನ್ನು ಒಂದು ಗೂಡಿಸಿದ. ಕೀಳು ಜಾತಿಯಿಂದ ಬಿಡುಗಡೆ ಮಾಡಲು ಪ್ರಯತ್ನಿಸಿದ. ಜಾತಿ ಸಮಾನತೆ, ವೃತ್ತಿ ಸಮಾನತೆ, ಲಿಂಗ ಸಮಾನತೆಯನ್ನು ನೆಲೆಗೊಳಿಸಲು ಬಸವಣ್ಣ ಪ್ರಯತ್ನಿಸಿ, ಕೆಳವರ್ಗಗಳ ನೂರಾರು ಜಾತಿ ಜನರನ್ನು ಮುಖ್ಯವಾಹಿನಿಗೆ ತರಲು ಶ್ರಮಿಸಿದ. ಕಾಯಕ ಜೀವಿಗಳಿಗೆ



ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ವಲಯಗಳಲ್ಲಿ ವಿಶೇಷ ಸ್ಥಾನಮಾನ ನೀಡಿದ. ಅವರೂ ಬಸವಣ್ಣನ ಮುಂದಾಳುತನದಲ್ಲಿ ಜತೆಗೂಡಿ ಹೆಜ್ಜೆ ಹಾಕಿದರು. ನಡೆ–ನುಡಿಯ ನಡುವಿನ ಕಂದಕವನ್ನು ಮುಚ್ಚಿ ಹಾಕಲು ಪ್ರಯತ್ನಿಸಿದರು. ಪ್ರಾಮಾಣಿಕವಾದ ಕಾಯಕದ ಜೊತೆಗೆ ದಾಸೋಹ ತತ್ವವನ್ನೂ ಬಾಳಿದರು. 'ಕಾಯಕವೇ ಕೈಲಾಸ' ಎಂಬುದನ್ನು ಲೋಕಕ್ಕೆ ತೋರಿಸಿದರು.

ಬಸವಣ್ಣ ಕಟ್ಟ ಬಯಸಿದ್ದ ಸಮಾಜಕ್ಕೆ ಕೈ ಜೋಡಿಸಿದವರು ಈ ಕಾಯಕ ಜೀವಿಗಳು. ಕಂಬಾರರು, ಕುಂಬಾರರು, ನೇಕಾರರು, ಚಮ್ಮಾರರು, ಬಡಿಗಾರರು, ಗಾಣಿಗರು, ಮಡಿವಾಳರು, ಮೇದಾರರು, ಹಡಪದರು ಈ ಬಗೆಯ ನೂರಾರು ವೃತ್ತಿ ನಿರತರು ಭಕ್ತಿ ಚಳುವಳಿಯಲ್ಲಿ ತುಂಬಿಕೊಂಡು ಬಸವಣ್ಣನಿಂದ ಭಕ್ತರೆಂದು ಕರೆಸಿಕೊಂಡರು. ಸಮಾಜದಲ್ಲಿ ಶರಣರೆಂದು ಗುರುತಿಸಿಕೊಂಡರು. ಹಾಗೆ ನೋಡಿದರೆ ಈ ಎಲ್ಲ ವೃತ್ತಿಗಾರರು ಸ್ಪೃಶ್ಯರು. ಇವರಲ್ಲದೆ ಸಮಾಜದ ಅಂಚಿನಲ್ಲಿ ಕೇರಿಯಲ್ಲಿದ್ದ ದಲಿತರು (ಅಸ್ಪೃಶ್ಯರು) ಇದ್ದರು. ಕಕ್ಕಯ್ಯ, ಚೆನ್ನಯ್ಯ, ಧೂಳಯ್ಯ ಪ್ರತಿನಿಧಿಸುವ ಕುಲದವರು ವಚನ ಚಳುವಳಿಯಲ್ಲಿ ಮನುಷ್ಯರಾದರು, ಭಕ್ತರಾದರು, ಶರಣರಾದರು. ಈ ಶರಣರನ್ನು ಬಸವಣ್ಣ ವ್ಯಾಖ್ಯಾನಿಸಿದ್ದನ್ನು ಆತನ ವಚನಗಳಿಂದ ತಿಳಿಯಬೇಕು. ಅಷ್ಟು ಪ್ರೇಮವಿಟ್ಟುಕೊಂಡಿದ್ದ ಬಸವಣ್ಣ ಶರಣರನ್ನು ಕುರಿತು ಯಾರಾದರೂ ಗೇಲಿ ಮಾಡಿದರೆ, ಕಟುವಾದ ಮಾತನಾಡಿದರೆ ಬಸವಣ್ಣನ ಸಹಿಸುತ್ತಿರಲಿಲ್ಲ.

ಬಸವಣ್ಣನ ಮಹಾಮನೆಯಲ್ಲಾಗಲಿ, ಅನುಭವ ಮಂಟಪದಲ್ಲಾಗಲಿ, ದಾಸೋಹದ ಮನೆಯಲ್ಲಾಗಲಿ 'ಉನ್ನತ' ಜಾತಿಯ ಬಸವಣ್ಣನಿಂದ ಹಿಡಿದು 'ಕೊನೆಯ' ಜಾತಿಯ ಮಾದಾರ ಧೂಳಯ್ಯನನ್ನು ಒಳಗೊಂಡು ಒಂದುಗೂಡಿ ಶಿವ ಸಮಾಜದ ಅನುಸಂಧಾನ ಮಾಡುವುದನ್ನು ಕಲ್ಪಿಸಿಕೊಳ್ಳಬಹುದು. ತಾತ್ವಿಕವಾಗಿ ಅದ್ಭುತವಾದ ಸಾಧನೆ ಎನ್ನಬಹುದು. ಸಾಮಾನ್ಯರು ಶಿವದೀಕ್ಷೆ ಪಡೆದು ವಚನ ಸಂವಿಧಾನವನ್ನು ನಿಷ್ಠೆಯಿಂದ ಅಳವಡಿಸಿಕೊಂಡು ಸಮಾನತೆಯ ಸಮಾಜವನ್ನು ಕಟ್ಟಿದರು. ಬಸವನ ವಚನ ಚಳುವಳಿಗೆ ಉತ್ಸಾಹದಿಂದಲೇ ಸಾಮಾನ್ಯರು ಸೇರಿ, ತತ್ವಪಾಲನೆಯಿಂದ ವೈದಿಕ ಧರ್ಮಕ್ಕೆ ಪ್ರತಿರೋಧವನ್ನು ಒಡ್ಡಿದ್ದು ದೊಡ್ಡ ಸಾಧನೆಯೇ ಸರಿ. ಆದರೆ ಬಸವಣ್ಣನ ಚಿಂತೆಗೆ, ಕಷ್ಟಗಳಿಗೆ ಗುರಿಯಾದದ್ದು ಇಲ್ಲಿಂದಲೇ. ನಾನಾ ಜಾತಿ, ಕುಲಗಳಿಂದ ಬಂದು ಶಿವದೀಕ್ಷೆ ಪಡೆದು ಒಂದು ಕುಲವಾಗಬೇಕು. ಅದು ಶರಣ 'ಕುಲ'. ಈ ಶರಣ ಕುಲದಲ್ಲಿ ಹಳೆಯದನ್ನು ಮರೆತು ಹೊಸ ಸಮಾಜದ ಹೊಸ ಮನುಷ್ಯರಾಗಿ ಮುಂದುವರಿದವರೆಷ್ಟು ಜನ. ಹಳೆಯದನ್ನು ಬಿಡದೆ ತಮ್ಮ ತಮ್ಮೊಳಗೆ ತರತಮ ಎಣಿಸಿಕೊಂಡು ನಿಂತರೆ? ಈ ಒಳ ಬಿರುಕನ್ನು ಮುಚ್ಚಲು ಬಸವಣ್ಣ ತನ್ನ ಜೀವವನ್ನೇ ತೇದಿರಬೇಕು. 'ದಾಸೀಪುತ್ರನಾಗಲಿ, ವೇಶ್ಯಾಪುತ್ರನಾಗಲಿ ಶಿವದೀಕ್ಷೆಯಾದ ಬಳಿಕ' ಮುಗಿಯಿತು. ಆತ ಶರಣನೆಂದು, ಶಿವನೆಂದು ತಿಳಿಯಬೇಕು. ಅದು ಬಿಟ್ಟು 'ಉದಾಸೀನವ' ಮಾಡಿದರೆ ಬಸವಣ್ಣನಿಗೆ ನೋವಾಗುತ್ತದೆ. ಸಿಟ್ಟೂ ಬರುತ್ತದೆ. ಈ ಉದಾಸೀನವ ಮೂಡುವುದು ಹೊರಗಿನವರಿಂದಲ್ಲ. ಶಿವದೀಕ್ಷೆ ಪಡೆದವರಿಂದಲೇ. ಒಳ ಒಳಗೆ ತಮಗಿಂತ ಕೆಳವರ್ಗದಿಂದ, ಜಾತಿಯಿಂದ ಬಂದವರನ್ನು ಕಂಡು ಉದಾಸೀನ ಮೂಡಿದರೆ ಶರಣತ್ವದ, ಶಿವದೀಕ್ಷೆಯ ಸಾರ್ಥಕತೆ ಉಳಿಯುವುದಿಲ್ಲ. ಇಂತಹ ಸನ್ನಿವೇಶದಲ್ಲಿ 'ಇವನಾರವ' ಎಂದು ಭಾವಿಸಬಾರದು. 'ಇವನಮ್ಮವನು' ಎಂದು ತಿಳಿಯಬೇಕು. ಶಿವದೀಕ್ಷೆ ಪಡೆದ ಪಡೆದವರೆಲ್ಲ, ಶರಣರೆಂದು ಗುರುತಿಸಿಕೊಂಡವರೆಲ್ಲರೂ ಕೂಡಲಸಂಗಮದೇವರ ಮನೆಯ ಮಕ್ಕಳು ಆಗಲೆಂದು ಬಸವಣ್ಣ ಹಂಬಲಿಸುತ್ತಾನೆ. ಈ

ವಚನದಲ್ಲಿ ವಿಷಾದವಿದೆ. ಕನಸ್ಸೂ ಇದೆ.

ಬಸವಣ್ಣನ ಉತ್ಸಾಹ ಒಂದು ಕಡೆಯಿದೆ: 'ಎಡದ ಕೈಯಲ್ಲಿ ಕತ್ತಿ, ಬಲದ ಕೈಯಲ್ಲಿ ಮಾಂಸ, ಬಾಯಲ್ಲಿ ಸುರೆಯಗಡಿಗೆ ಕೊರಳಲ್ಲಿ ದೇವರಿರಲಿ, ಅವರನ್ನು ಲಿಂಗವೆಂಬೆ' ನಾನಾ ಬಗೆಯ ಜನರು ವಚನ ಚಳುವಳಿಗೆ ಬಂದು ಬಂದು ಸೇರುವ ಕಾಲಕ್ಕೆ ಬಸವಣ್ಣ ತಾಳಿದ ನಿಲುವಿಗೂ, ನಂತರದ ನಿಲುವಿಗೂ ವ್ಯತ್ಯಾಸವಿದೆ. 'ಉಂಬಲ್ಲಿ ಉಡುವಲ್ಲಿ ಕ್ರೀಯಳಿಯಿತ್ತೆಂಬರು, ಕೋಬಲ್ಲಿ ಕೊಡುವಲ್ಲಿ ಕುಲವನರಸುವರು' ಬಸವಣ್ಣನ ಹತಾಶೆ ಇಲ್ಲಿ ವ್ಯಕ್ತವಾಗಿದೆ. ಅದಕ್ಕಾಗಿ 'ಇವನಾರವ' ಎಂದು ಭಾವಿಸಬಾರದು. 'ಇವನಮ್ಮವ' ಎಂದು ಭಾವಿಸಬೇಕು ಎಂದು ವಿನಂತಿಯನ್ನು ಮೀರಿದ ಅಂತಃಕರಣದ ಮಾತು ಇದು. ●

*'ಸೂರು', ಎಂ.ಪಿ. ಪ್ರಕಾಶ ನಗರ, ಮಾರ್ಕಂಡೇಶ್ವರ ಡಿಇಡಿ ಕಾಲೇಜು ಹತ್ತಿರ, ಹೊಸಪೇಟೆ – ೫೮೩ ೨೦೧*
*ಬಳ್ಳಾರಿ ಜಿಲ್ಲೆ ಮೊ: ೯೪೮೧೫ ೬೯೪೫೯*

---

## ಶ್ರದ್ಧಾಂಜಲಿ

### ಶ್ರೀ ಬಸವಲಿಂಗಪ್ಪ ಶ್ರೀಶೈಲಪ್ಪ ರಾಮತೀರ್ಥ



ಬಸಲಿಂಗಪ್ಪ ಶ್ರೀಶೈಲಪ್ಪ ರಾಮತೀರ್ಥ, ಮುಧೋಳ ಇವರು ಸುದೀರ್ಘ ಕಾಲ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಸೇವೆ ಸಲ್ಲಿಸಿ ಸಾವಿರಾರು ವಿದ್ಯಾರ್ಥಿಗಳಿಗೆ ವಿದ್ಯಾದಾನಗೈದ ಪುಣ್ಯಜೀವಿ. ಸೇವಾ ನಿವೃತ್ತಿಯ ನಂತರ ತಮ್ಮನ್ನು ತಾವು ಸಮಾಜೋಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡವರು. ಶ್ರೀಯುತರು ೧೨ ವರ್ಷ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಮುಧೋಳ ತಾಲೂಕಾ ಘಟಕದ ಅಧ್ಯಕ್ಷರಾಗಿ ನಿಷ್ಠ ಸೇವೆ ಸಲ್ಲಿಸಿದರು.

ತಮ್ಮ ಪೂಜ್ಯ ತಾಯಿ ಲಿಂ. ಶ್ರೀಮತಿ ಈರವ್ವ ಶ್ರೀಶೈಲಪ್ಪ ರಾಮತೀರ್ಥ ಇವರ ಹೆಸರಿನಲ್ಲಿ ದತ್ತಿ ದಾನ ನೀಡಿ ಸಾರ್ಥಕತೆ ಪಡೆದವರು. ಇಂಥ ಶರಣ ಸಾಹಿತ್ಯ ಪ್ರೇಮಿಯಾಗಿದ್ದ ಶ್ರೀಯುತರು ಇತ್ತೀಚೆಗೆ ಲಿಂಗೈಕ್ಯರಾದುದು ವಿಷಾದನೀಯ. ಅವರನ್ನು ಸ್ಮರಿಸುತ್ತಾ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಬಸವಾದಿ ಪ್ರಮಥರು ಅವರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ ಮತ್ತು ಅವರ ಪರಿವಾರದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿ ನೀಡಲಿ ಎಂದು ಭಗವಂತನಲ್ಲಿ ಕೋರುತ್ತದೆ.

---

## ಶ್ರದ್ಧಾಂಜಲಿ

### ಡಾ. ಈಶ್ವರಯ್ಯ ಮಠ



ಡಾ. ಈಶ್ವರಯ್ಯ ಮಠ ಅವರು ಶರಣ ಸಾಹಿತ್ಯ ಪರಿಷತ್ತಿನ ಕಲಬುರಗಿ ಜಿಲ್ಲಾ ಘಟಕದ ಅಧ್ಯಕ್ಷರಾಗಿದ್ದರು. ಯಾದಗಿರಿ ಜಿಲ್ಲೆಯ ಸುರಪುರ ತಾಲ್ಲೂಕಿನ ಕೊಡೇಕಲ್‌ನಲ್ಲಿ ನಡೆದ ಪ್ರಥಮ ವಿಭಾಗ ಮಟ್ಟದ ಶರಣ ಸಮ್ಮೇಳನದ ಸ್ಮರಣ ಸಂಚಿಕೆ 'ಬಸವನ ಸಾಗರ' ಮತ್ತು ಕಲಬುರಗಿ ಜಿಲ್ಲಾ ಪ್ರಥಮ ಶರಣ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ 'ಶರಣ ಮಾರ್ಗ'ದ ಸಂಪಾದಕರಾಗಿದ್ದರು. ಇಲ್ಲಿಯವರೆಗೆ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ಕಾರ್ಯಕಾರಿ ಸಮಿತಿ ಸದಸ್ಯರಾಗಿ ಕೆಲಸ ಮಾಡಿದ್ದಾರೆ. 'ಶರಣ ಸಾಹಿತ್ಯ'ದ ಬಗ್ಗೆ ಆಳವಾದ ಅಧ್ಯಯನ ಮಾಡಿದ, ಉತ್ತಮ ವಾಗ್ಮಿಗಳಾಗಿದ್ದ ಡಾ. ಈಶ್ವರಯ್ಯನವರು ಸ್ವರವಚನಗಳ ಬಗ್ಗೆ ಮಹಾ ಪ್ರಬಂಧ ರಚಿಸಿರುವವರಲ್ಲದೇ ವಚನಸಾಹಿತ್ಯದ ಬಗ್ಗೆ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಡಾ. ಈಶ್ವರಯ್ಯ ಮಠ ಅವರು ಶರಣ ಸಾಹಿತ್ಯ ಮತ್ತು ಪರಿಷತ್ತಿಗೆ ಸಲ್ಲಿಸಿದ ಸೇವೆ ಅನುಪಮವಾದದ್ದು, ಅಪಾರವಾದದ್ದು.

ಡಾ. ಈಶ್ವರಯ್ಯ ಮಠ ಅವರನ್ನು ಸ್ಮರಿಸುತ್ತಾ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು ಅವರ ಆತ್ಮಕ್ಕೆ ಶಾಂತಿಯನ್ನು ಮತ್ತು ಅವರ ಕುಟುಂಬದವರಿಗೆ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿ ನೀಡಲಿ ಎಂದು ಭಗವಂತನಲ್ಲಿ ಕೋರುತ್ತದೆ.



# ಜೈನರ ಸಮವಸರಣಮಂಟಪ – ಅನುಭಾವಮಂಟಪ

ಡಾ. ಬಸವರಾಜ ಬಲ್ಲೂರ

***ಹಿನ್ನೆಲೆ:***

ಭಾರತದ ಕೆಲವೇ ಪ್ರತಿಷ್ಠಿತ ಧರ್ಮಗಳಲ್ಲಿ ಒಂದಾದ ಜೈನಧರ್ಮಕ್ಕೆ ಮಹಾವೀರನೇ ಗುರು. ಆದರೆ ಮಹಾವೀರನು ೨೪ನೆ ತೀರ್ಥಂಕರನೆಂದು ಕರೆಯುವುದರಿಂದ ಇವನಿಗಿಂತ ಮೊದಲು ೨೩ ಜನ ತೀರ್ಥಂಕರರು (ಗುರುಗಳು) ಇದ್ದರೆಂಬ ನಂಬಿಕೆ ಇದೆ. ಈ ನಂಬಿಕೆ ಸತ್ಯವಾದಲ್ಲಿ ಜೈನಮತದ ಪ್ರಾಚೀನತೆ ಕ್ರಿ.ಪೂ. ೯ನೆಯ ಶತಮಾನದಷ್ಟು ಹಿಂದೆ ಸರಿಯುತ್ತದೆ. ಆದರೆ ಆರಂಭದ ೧೫ ಜನ ತೀರ್ಥಂಕರರು ಪೂರ್ವ ಉತ್ತರ ಪ್ರದೇಶದ ಹಾಗೂ ಬಿಹಾರದ ಪ್ರಾಂತದವರೆಂದು ಹೇಳಲಾಗಿದೆ. ಕ್ರಿ.ಪೂ. ೯ನೆ ಶತಮಾನಕ್ಕಿಂತ ಪೂರ್ವದಲ್ಲಿ ಈ ಗಂಗಾ ಬಯಲಿನಲ್ಲಿ 'ಜನವಸತಿ' ಇತ್ತು ಎನ್ನುವ ಬಗ್ಗೆ ಖಚಿತವಾದ ಚಾರಿತ್ರಿಕ ಮಾಹಿತಿ ಇಲ್ಲ. ಹೀಗಾಗಿ ಆ ಕಾಲ ಹಲವಾರು ಅನುಮಾನ, ಸಂದೇಹಕ್ಕೆ ಎಡೆ ಮಾಡಿಕೊಡುತ್ತದೆ. ಜೈನ ಮತದ ಬೋಧನೆಗಳ ಆರಂಭ ಮಾಡಿದವನು ಪ್ರಾಯಶಃ ೨೩ನೆ ತೀರ್ಥಂಕರನಾದ ಪಾರ್ಶ್ವನಾಥನೇ ಮೊದಲಿಗನಿರಬೇಕು. ಇವನು ಮೂಲತಃ ವಾರಣಾಸಿಯವನು. ಅರಸೊತ್ತಿಗೆ (ರಾಜ ಜೀವನ) ತ್ಯಜಿಸಿ ಸನ್ಯಾಸಿಯಾದ ಪಾರ್ಶ್ವನಾಥನ ಬೋಧನೆಯ ಪ್ರಭಾವಕ್ಕೆ ಒಳಗಾಗಿ ಅವನು ಆಧ್ಯಾತ್ಮಿಕ ಉತ್ತರಾಧಿಕಾರಿಯಾಗಿ ಕಾರ್ಯನಿರ್ವಹಿಸಿದ ವರ್ಧಮಾನ ಮಹಾವೀರನು ಜೈನಮತದ ಸ್ಥಾಪನೆ ಮಾಡಿ ಆ ಧರ್ಮಕ್ಕೆ ಸೈದ್ಧಾಂತಿಕ ನೆಲೆಯನ್ನು ರೂಪಿಸಿದನು.

***ಮಹಾವೀರ:***

ಕ್ರಿ.ಪೂ. ೫೪೦ರಲ್ಲಿ ಬಿಹಾರದ ವೈಶಾಲಿ ಜಿಲ್ಲೆಯ ಬಸಾರ್ ಎಂಬ ಹಳ್ಳಿಯಲ್ಲಿ ವರ್ಧಮಾನ ಮಹಾವೀರ ಹುಟ್ಟಿದನು. ೧೦೨ ಇವನ ತಂದೆ ಪ್ರಸಿದ್ಧ ಕುಲದ ಮುಖ್ಯಸ್ಥ ಸಿದ್ಧಾರ್ಥ. ತಾಯಿ ತ್ರಿಶೂಲಚ್ಛವಿ ಕುಲದ ನಾಯಕ ಚೇತಕನ ಸಹೋದರಿ. ಚೇತಕನ ಮಗಳು ಮಗಧ ಅರಸನಾದ ಬಿಂಬಸಾರನ ಹೆಂಡತಿ. ಹೀಗೆ ಮಹಾವೀರನ ಪರಿವಾರವು ಅರಸು ಮನೆತನಕ್ಕೆ ಸಂಬಂಧಿಯಾಗಿತ್ತು. ಇದರಿಂದ ಮಹಾವೀರನಿಗೆ ಮತಧರ್ಮ ಪ್ರಚಾರಕ್ಕಾಗಿ ಅರಸು ಮನೆತನದ ಸಹಾಯ ಸರಳವಾಗಿ ದಕ್ಕಿತು.

ಮಹಾವೀರನು ಗೃಹಸ್ಥ ಜೀವನ ನಡೆಸಿ ಒಂದು ಹೆಣ್ಣು ಮಗುವನ್ನು ಪಡೆದನು. ತನ್ನ ಮೂವತ್ತನೇ ವಯಸ್ಸಿನಲ್ಲಿ ಸತ್ಯಾನ್ವೇಷಣೆಗಾಗಿ ಸಂಸಾರ ತ್ಯಾಗ ಮಾಡಿ, ಸನ್ಯಾಸಿಯಾದನು. ಸುಮಾರು ೧೨ ವರ್ಷ ದೀರ್ಘ ಪ್ರವಾಸ ಕೈಗೊಂಡನು. ಈ ಸಂದರ್ಭದಲ್ಲಿ ಅವನು ಭಾರತದ ಅನೇಕ ಕಡೆ ತಪಸ್ಸನ್ನು ಮಾಡಿದನು.

ಈ ಮಧ್ಯೆ ಅವನು ಎಲ್ಲಿಯೂ ಒಂದೆಡೆ ನೆಲೆ ನಿಲ್ಲದೆ ನಿರಂತರ ಸಂಚರಿಸಿದನು. ಹಳ್ಳಿಯಾದರೆ ಒಂದು ರಾತ್ರಿ, ಊರಾದರೆ ಐದು ರಾತ್ರಿ ಮೀರದ ಹಾಗೆ ಸಂಚರಿಸಿದನು. ಈ

೧೨ ವರ್ಷಗಳ ಕಾಲ ಬದಲಾಯಿಸದೆ ಇದ್ದ ಬಟ್ಟೆಗಳನ್ನು ಕೈವಲ್ಯ (ಕೇವಲ) ಜ್ಞಾನ ಪಡೆದ ನಂತರ ಪೂರ್ತಿ ಬಟ್ಟೆಯನ್ನೇ ತ್ಯಜಿಸಿದ. ಆ ಮೂಲಕ ಸುಖ-ದುಃಖಗಳನ್ನು ಜಯಿಸಿ 'ಜಿನ'ನಾದ. ಮುಂದೆ ಅವನ ಅನುಯಾಯಿಗಳು ಜೈನರಾದರು. ಪುನಃ ಮೂವತ್ತು ವರ್ಷಗಳ ಕಾಲ ತಾನು ಕಂಡ ಸತ್ಯದರ್ಶನದ ಫಲವನ್ನು ಮತ-ತತ್ವಗಳ ರೂಪದಲ್ಲಿ ಪ್ರಚಾರ ಮಾಡಿದನು. ಕೋಸಲ, ಮಗಧ, ಮಿಥಿಲಾ, ಚಂಪಾ ಮೊದಲಾದ ರಾಜ್ಯಗಳಲ್ಲಿ ಅವನಿಗೆ ಪ್ರೋತ್ಸಾಹ ದೊರೆಯಿತು. ತನ್ನ ೭೦ನೆ ವಯಸ್ಸಿನಲ್ಲಿ ಅಂದರೆ ಕ್ರಿಪೂ. ೪೬೭ರಲ್ಲಿ ಇಂದಿನ ರಾಜಗೀರ ಬಳಿ ಇರುವ ಪಾವಾ ಪುರಿಯಲ್ಲಿ ನಿರ್ವಾಣ ಹೊಂದಿದನು. ಅವನ ತತ್ವ, ಉಪದೇಶಗಳು ಅಮರವಾದವು. ಮುಂದೆ ಹಲವಾರು ರಾಜರು, ಚಕ್ರವರ್ತಿಗಳು ಅವುಗಳಿಗೆ ಆಶ್ರಯ ನೀಡಿ ಪ್ರೋತ್ಸಾಹಿಸಿದರು.

ಮಹಾವೀರನು ಜೈನ, ಮತ-ತತ್ವವನ್ನು ಪ್ರಸಾರ ಮಾಡಲು ಒಂದು ವೇದಿಕೆ ಕಟ್ಟಿದನು. ಅದನ್ನು 'ಸಮವಸರಣಮಂಟಪ'ವೆಂದು ಕರೆಯುತ್ತಾರೆ. ಜೈನರಲ್ಲಿ ಮೋಕ್ಷಪ್ರಾಪ್ತವಾಗಲು ಸಮವಸರಣಮಂಟಪದ ಮೂಲಕ ಸಾಧ್ಯವೆಂಬ ಕಲ್ಪನೆ ಸಹ ಇತ್ತು. ಆ ಸಮವಸರಣಮಂಟಪ ಮೋಕ್ಷಕ್ಕೆ ನಿಚ್ಚಣಿಕೆಯಾಗಿ ಮಹತ್ವದ ಕಾರ್ಯನಿರ್ವಹಿಸಿದೆ.

## ***ಜೈನರ ಸಮವಸರಣಮಂಟಪ***

### ***ಪದ ವಿವೇಚನೆ:***

ಸಮವಸರಣಮಂಟಪದ ಹೆಸರಿನ ಕುರಿತು ಕುತೂಹಲಕರ ರೀತಿಯಲ್ಲಿ ಚರ್ಚೆ ನಡೆದಿದೆ. ಅದೆಲ್ಲಕ್ಕೂ ಜೈನಪುರಾಣಗಳೇ ಆಧಾರ ಒದಗಿಸಿಕೊಡುತ್ತವೆ. ಬೇರೆ-ಬೇರೆ ಪುರಾಣಗಳಲ್ಲಿ ಈ ಮಂಟಪವನ್ನು ಬೇರೆ ಬೇರೆ ಹೆಸರಿನಿಂದ ಕರೆಯಲಾಗಿದೆ. ಆದರೆ ಆ ಎಲ್ಲ ಪದಗಳ ಮೂಲ ಅರ್ಥ ಒಂದೇ ಆಗಿದೆ. ಸಮವಸರಣಮಂಟಪವನ್ನು 'ಸಮವಸರಣ ಆಸ್ಥಾನ, ಸಮವಶೃತಿ, 'ಸಮವಸರಣಸ್ಥಲ' ಮತ್ತು ಸಮವಸರಣಭೂಮಿ' ಎಂಬ ಅನೇಕ ಹೆಸರುಗಳಿಂದ ಕರೆಯಲಾಗಿದೆ. ಆದರೆ ಈ ಪದಗಳ ಬಗ್ಗೆ ಖಚಿತ ದಾಖಲೆಗಳು ದೊರೆಯಲಾರವು. ಆದರೂ ತಾರ್ಕಿಕವಾಗಿ ಇದನ್ನು ವಿವರಿಸಲು ಸಾಧ್ಯವಿದೆ.

'ಸಮವಸರಣಮಂಟಪ ಎಂದರೆ ಕೇವಲಜ್ಞಾನಿಯಾದ ನಂತರ ತೀರ್ಥಂಕರನ ಉಪದೇಶಕ್ಕಾಗಿ ಇಂದ್ರನ ಅಪ್ಪಣೆಯಂತೆ ಕುಬೇರನಿಂದ ರಚಿತವಾದ ಮಂಟಪ" ೧೦೩ ಸಮವಸರಣ ಎಂಬ ಶಬ್ದದಲ್ಲಿ ಸಂ+ ಅವಸರ, ಸಂ+ಅವ+ಸೃ ಎಂಬ ಪದಗಳು ಸೇರಿದಂತೆ ಕಂಡುಬರುತ್ತದೆ. ಇಲ್ಲಿ ಸಂ ಎಂದರೆ ಉದಾತ್ತ ಒಳ್ಳೆಯ, ಉತ್ತಮ ಎಂಬಿತ್ಯಾದಿ ಅರ್ಥಗಳು ಸಿದ್ಧಿಸುತ್ತವೆ.

ದೇವರು, ರಾಕ್ಷಸರು ತೀರ್ಥಂಕರರಲ್ಲಿ ಬಂದು ಜ್ಞಾನ-ಬೋಧನೆ ಪಡೆಯಲು ಅವಕಾಶಕ್ಕಾಗಿ ಕಾಯುತ್ತಿದ್ದರೆಂದು ಕಲ್ಪಿಸಿಕೊಂಡರೆ ಸ+ಅವಸರ ಎಂಬ ಅರ್ಥಕ್ಕೆ ಹತ್ತಿರವಾಗುತ್ತದೆ. ಇದೇ ಬಹುಶಃ ತೀರ್ಥಂಕರ ಧರ್ಮೋಪದೇಶ ಮಾಡುವ ಸ್ಥಳವಾದ್ದರಿಂದ ಅದನ್ನು ವೇದಿಕೆಯೆಂತಲೋ, ಮಂಟಪವೆಂತಲೋ ಕರೆಯುತ್ತ ಸಮವಸರಣಮಂಟಪವಾಗಿರಬೇಕು. ಈ ಮಾತಿಗೆ ಸಮರ್ಥನೆಗಾಗಿ,

> **"ಸವೇತ್ಯಾವಸರೇ ಪ್ರೇಕ್ಷಾಸ್ತಿಷ್ಠಂತ್ಯಸ್ಮಿನ್ಸುರಾಸುರಾಃ**
> **ಇತಿ ತಜ್ಞೈರ್ಗಿರುಕ್ತಂ ತತ್ಸರಣ ಸಮವಾದಿಕಂ"[೧೦೪]**



ಅಂದರೆ ದೇವತೆಗಳು ಅಸುರರು ಬಂದು ಈ ಮಂಟಪದಲ್ಲಿ ನಿಯಮಿತ ಅವಸರ, ಅವಕಾಶವನ್ನು ನೋಡುತ್ತಿರುವುದರಿಂದ ನಿರುಕ್ತಿಯನ್ನು ತಿಳಿದವರು. ಅದಕ್ಕೆ ಸಮ್+ಅವ ಪೂರ್ವಕವಾದ ಸರಣವೆಂದು ಊಹಿಸಿದ್ದಾರೆ.

ಸಂ+ಅವ+ಸೃ ಎನ್ನುವಲ್ಲಿ ಸಹ ಉದಾತ್ತವಾದದ್ದನ್ನು ಕೇಳು, ಅಪೇಕ್ಷೆಪಡು ಎಂಬ ಭಾವವಿದ್ದು, ಜ್ಞಾನದಾಹದಿಂದ ಬಂದವರಿಗೆ ತೀರ್ಥಂಕರ ಅದನ್ನು ಶ್ರುತಪಡಿಸುವ ವಿಚಾರ ಅದರಲ್ಲಿ ಅಡಗಿದಂತಿದೆ.

ಸಮವಸರಣ ಎಂಬ ಶಬ್ದವನ್ನು ಇನ್ನೊಂದು ನೆಲೆಯಲ್ಲಿ ವಿವರಿಸಲು ಸಾಧ್ಯವಿದೆ. ಸಮಯ್+ಶ್ರವಣ ಎಂಬುದಾಗಿ ವಿಭಾಗಿಸುವಾಗ 'ಸಮಯ' ಎಂದರೆ ಆಧ್ಯಾತ್ಮ ನೆಲೆಯಲ್ಲಿ 'ಧರ್ಮ' ಎಂದರ್ಥ. ಮುಂದೆ ಶ್ರವಣ ಎಂದರೆ 'ಕೇಳು' ಎಂದರ್ಥ. ಅಂದರೆ ಧರ್ಮವನ್ನು ಕೇಳು, ಅರಿವನ್ನು ಪಡೆದ, ಜ್ಞಾನವನ್ನು ಹೊಂದು ಎನ್ನುವ ಸಾರ್ಥಕ ಬದುಕಿನ ಬಗ್ಗೆ ಇರುವ ಒಂದು ಸಾತ್ವಿಕ ವೇದಿಕೆ ಎಂದು ಅರ್ಥೈಸಬಹುದು.

ಈ ಮೇಲಿನ ಅರ್ಥಗ್ರಹಿಕೆಗಳ ಹಿನ್ನೆಲೆಯಲ್ಲಿ ಸಮವಸರಣವೆಂಬುದು ಒಂದು ಧಾರ್ಮಿಕ ಗೋಷ್ಠಿಯಾಗಿತ್ತು. ಅನುಭಾವಿಗಳ ತೋಟವಾಗಿತ್ತು. ಜೀವರಾಶಿಗಳ ಒಳಿತಿಗಾಗಿ ರೂಪಿತವಾದ ಮಹಾನ್ ವೇದಿಕೆ ಇದಾಗಿತ್ತು ಎಂದು ಹೇಳಬಹುದು. ಮಾನವನಾಗಲಿ, ದೇವನಾಗಲಿ, ರಾಕ್ಷಸನಾಗಲಿ ಯಾರೇ ಬಂದರೂ ಅವರನ್ನು ಮುಕ್ತಾತ್ಮರನ್ನಾಗಿಸುವ ವೇದಿಕೆಯೇ ಸಮವಸರಣಮಂಟಪವೆಂದು ಕರೆಯಬಹುದು.

### ***ಸಮವಸರಣಮಂಟಪದ ರಚನೆ:***

ಜೈನತತ್ವ ಸಿದ್ಧಾಂತಗಳ ಪ್ರಕಾರ ಈ ಜಗತ್ತು ಅನಾದಿ, ಅನಂತ. ಇದೊಂದು ಸೃಷ್ಟಿಯ ಸ್ವಯಂ ರಚನೆ. ಇದು ಯಾರೂ ನಿರ್ಮಿಸಿದ್ದಲ್ಲ. ಹಾಗೇ ಇದನ್ನು ಯಾರೂ ನಾಶ ಮಾಡುವಂತಿಲ್ಲ. ಈ ಸೃಷ್ಟಿಯ ಮೇಲೆ ಉತ್ತಮ ನಾಗರಿಕತೆ ಆರಂಭವಾದದ್ದು ಚತುರ್ದಶ ಮನುಗಳಿಂದ. ಅವರು ಕಾಲಕಾಲಕ್ಕೆ ಜೀವ-ಜಗತ್ತಿಗೆ ಭಿನ್ನವಾದ ಜ್ಞಾನದ್ವಾರಗಳನ್ನು ಅರುಹಿದರು. ಜೈನರ ಬಹುತೇಕ ಪುರಾಣಗಳಲ್ಲಿ ನಾಗರಿಕತೆಯ ನಿರ್ಮಾಣ ವೃಷಭನಿಂದ ಆರಂಭವಾದವು ಎಂದು ಹೇಳುತ್ತವೆ. ಆದರೆ ವೃಷಭನಿಗೆ ಹಿಂದಿನ ಹದಿನಾಲ್ಕು ಮನುಗಳು ಪ್ರೇರಣೆ ಒದಗಿಸಿದ್ದು ಮರೆಯುವಂತಿಲ್ಲ. ಹಾಗೆಯೇ ೧೪ ಮನುಗಳು ಸಹ ಈ ಜಗದ ರಚನೆಗಾಗಲಿ ಬದಲಾವಣೆಗಾಗಲೀ ಶ್ರಮಿಸಿಲ್ಲ. ಇರುವ ಸೃಷ್ಟಿಯ ಮೇಲೆ ಹೊಸ ಪ್ರಯೋಗ ಸಾಧ್ಯತೆಗಳಿಗಾಗಿ ಪ್ರಯತ್ನಿಸಿದ್ದಾರೆ. ಆದರೆ ನಾಗರಿಕತೆಯ ಭದ್ರ ಅಡಿಪಾಯ ಹಾಕಿದವ ಮಾತ್ರ ವೃಷಭ. ಆದ್ದರಿಂದ ವೃಷಭನು ಜೈನಪುರಾಣಗಳ ಪ್ರಕಾರ ೧೫ನೆ ಮನುವಾದ.

೧೫ನೆ ಮನುವಾದ ಆದಿತೀರ್ಥಂಕರ ವೃಷಭನೇ ಸಮವಸರಣಮಂಟಪದ ರಚನೆಯ ಪರಿಕಲ್ಪನೆಯನ್ನು ಹುಟ್ಟುಹಾಕಿದವನೆಂದು ಹೇಳಬಹುದು. ಇದೇ ಬಹುಶಃ ತೀರ್ಥಂಕರ ಸಭಾಮಂಟಪವಾಗಿರಬೇಕು. ಇದರ ಸಮರ್ಥನೆಗೆ ಯಾವ ಆಧಾರಗಳೂ ದೊರೆಯಲಾರವು. ಆದರೆ ಕೆಲ ಜೈನ ಪುರಾಣಗಳು ಈ ಸಮವಸರಣ ಮಂಟಪ ಇಂದ್ರನಿರ್ಮಿತವೆಂದು ಸಾರುತ್ತವೆ. ಹಾಗೆ ಮನುಗಳು ಈ ಮಂಟಪ ರಚಿಸಿದರೆಂದು ದಾಖಲೆಗಳಿಲ್ಲ.

ವೃಷಭನ ಪರಿಕಲ್ಪನೆಯಲ್ಲಿ ಮೂಡಿದ ಈ ಸಮವಸರಣಮಂಟಪವು ಆರಂಭದಲ್ಲಿ ವಾಸ್ತುರೂಪದ ನಾಗರಿಕತೆಯ ಪ್ರತೀಕವಾಗಿ ರೂಪು ಪಡೆದಿರಬೇಕು. ಮುಂದಿನ ತೀಥಕರರಲ್ಲಿ ಅದು ಬೆಳೆದು ವಿಸ್ತೃತವಾಗಿರಬೇಕು.

ಇದೊಂದು ಆಧ್ಯಾತ್ಮಿಕವಾದ ಧಾರ್ಮಿಕ ಚೌಕಟ್ಟಿನಲ್ಲಿಯೇ ಗುರುತಿಸುವುದರಿಂದ ಇದರ ರಚನೆ ವಿನ್ಯಾಸ ಕುರಿತು ಪುರಾಣಗಳು ಅಷ್ಟೊಂದು ಮುತುವರ್ಜಿವಹಿಸಿಲ್ಲವೆಂದು ಕಾಣುತ್ತದೆ. ಆದರೂ ಅಲೌಕಿಕವಾದ ಭಕ್ತಿ-ಭಾವಗಳ ಜೊತೆಗೆ ಪುರಾಣ ಕವಿಗಳು ಸಮವಸರಣಮಂಟಪವನ್ನು ವಿವರಿಸಿದ್ದಾರೆ. ವಾಸ್ತವದಲ್ಲಿ ಸಮವಸರಣ ಮಂಟಪವು ಒಂದು ಬಯಲು ಜಿನಾಲಯವಾಗಿದ್ದು, ಕೃತ್ರಿಮವಲ್ಲದ ಚೈತ್ಯಾಲಯವಾಗಿರಬೇಕು. ಈ ನಾಲ್ಕು ಗೋಡೆಗಳು ಜಿನಾಲಯದ ಮೊದಲಿನ ಸ್ಥಿತಿಯೇ ಅದು. ಬಹುಶಃ ಇದರ ಮುಂದಿನ ಬೆಳವಣಿಗೆಯೇ ವ್ಯವಸ್ಥಿತವಾದ ಜಿನಾಲಯಗಳದು ಎಂದು ಹೇಳಬಹುದು.

**ಸಮವಸರಣಮಂಟಪದ ಮಹತ್ವ:**

ಪ್ರತಿಯೊಂದು ಧರ್ಮ, ತತ್ವ ಹಾಗೂ ದರ್ಶನದ ಅಂತಿಮ ನೆಲೆ ಜೀವಿಯ ಸಾರ್ಥಕತೆಯಲ್ಲಿ ಪರ್ಯಾವಸನಗೊಳ್ಳುತ್ತದೆ. ಆದ್ದರಿಂದ ಸಮವಸರಣಮಂಟಪದ ಅಂತಿಮ ಉದ್ದೇಶ ಜೀವಿಯ ಸಾರ್ಥಕತೆಯೇ ಆಗಿರುವುದರಿಂದ ಜೈನ ತತ್ವಸಿದ್ಧಾಂತದಲ್ಲಿ ಇದಕ್ಕೆ ಅತ್ಯಂತ ಮಹತ್ವದ ಸ್ಥಾನ ಕಲ್ಪಿಸಲಾಗಿದೆ. ಸಮವಸರಣಮಂಟಪ ಅತ್ಯಂತ ಜನ ಸಮ್ಮುಖವಾಗಿದ್ದು, ಇಡೀ ಜೈನಸಿದ್ಧಾಂತಗಳ ಒಟ್ಟುಸಾರದ ಚರ್ಚೆ ಇಲ್ಲಿ ನಡೆದಿದೆ.

ಈ ಸಮವಸರಣಮಂಟಪ ಆಧ್ಯಾತ್ಮ ಮೂಲವಾದರೂ ಸಹ ಧಾರ್ಮಿಕತೆಯಂತೆ ಲೌಕಿಕ ದೃಷ್ಟಿಯಿಂದ ಗ್ರಹಿಸಲು ಸಾಧ್ಯವಿದೆ. ಜೀವನ್ಮರಣಗಳ ಚಿಂತನ ಕೇಂದ್ರವಾದ ಇದು ಧಾರ್ಮಿಕ ಪಾಠಶಾಲೆಯಾದಂತೆ. ಲೌಕಿಕ ಬದುಕಿನ ತರಬೇತಿ ಕೇಂದ್ರವೂ ಆಗಿತ್ತು. ಇಲ್ಲಿನ ಚರ್ಚೆಗೆ ಜೈನತತ್ವ ಸಿದ್ಧಾಂತಗಳನ್ನು ಆಯ್ಕೆಮಾಡಿಕೊಂಡರು. ಮೇಲ್ನೋಟಕ್ಕೆ ಧರ್ಮಪ್ರಸಾರದಂತೆ ಕಂಡುಬಂದರೂ ಸಹ ಮನುಕುಲದ ಬದುಕನ್ನು ನೇರಗೊಳಿಸುವ ಆಶಯಗಳು ಇಲ್ಲಿವೆ. ಹೀಗಾಗಿಯೇ ಅದು ಒಂದು ಸೀಮಿತತೆಗೆ ಮೀರಿ ಬೆಳೆದದ್ದು ಸತ್ಯ. ಇಲ್ಲಿ ಪ್ರಾದೇಶಿಕ, ಭಾಷಿಕ ಭಿನ್ನತೆಗಳಾಗಲಿ ಇರಲಿಲ್ಲ. ವಿವಿಧ ವಸ್ತು-ವಿಷಯ ಕುರಿತ ಚರ್ಚೆ ನಡೆದ ಬಗ್ಗೆ ಜೈನ ಪುರಾಣಗಳು ಅಧಿಕೃತ ಮಾಹಿತಿ ಒದಗಿಸುತ್ತವೆ. ಪುರಾಣ ಮೂಲದ ಸಾಂಕೇತಿಕ ಸಂಖ್ಯೆಯ ವಿವರಗಳಾಗಲಿ, ದೇವತೆಗಳ ಗುಣಲಕ್ಷಣಗಳಾಗಲಿ ಬದಿಗಿರಿಸಿದಾಗ ಸಮವಸರಣಮಂಟಪದ ಕುರಿತು ಆಲೋಚನೆ ಮಾಡಲು ಸಾಧ್ಯವಿದೆ. ಅದಕ್ಕೆ ಇಡೀ ಜೀವರಾಶಿಗಳ ಅಭ್ಯುದಯದ ಹಿನ್ನೆಲೆಯಿದೆ. ಅದರ ಮಹತ್ವ ಪೌರಾಣಿಕ ವೈಭವ ಅತಿಶಯೋಕ್ತಿಯನ್ನು ಮೀರಿದ ಅಂಶಗಳೆಂದರೆ ದಾರ್ಶನಿಕರ ಜಿಜ್ಞಾಸೆಗಳ ಸಿದ್ಧಾಂತಗಳು ಪ್ರತಿಜೀವಿಯೂ ಅಳವಡಿಸಿಕೊಳ್ಳಬಹುದಾದ ರೀತಿಯನ್ನು, ಅದರಿಂದ ವ್ಯಕ್ತವಾಗುವ ಪ್ರಯೋಜನವನ್ನು ವಿವರಿಸುವ ವೇದಿಕೆ ಅದಾಗಿತ್ತು. ಈ ಪ್ರಯತ್ನವನ್ನು ಸಾಮಾನ್ಯ ಎಂದು ಗ್ರಹಿಸಲು ಸಾಧ್ಯವಿಲ್ಲ. ಆದ್ದರಿಂದ ಅದು ಎಲ್ಲರ ಪ್ರಯೋಜನ ಮೂಲ ಮಂಟಪವಾಗಿತ್ತು.

ಸಮವಸರಣಮಂಟಪಕ್ಕೆ ಎರಡು ಮುಖಗಳಿವೆ. ಒಂದು ಅಧ್ಯಾತ್ಮ ಮುಖ. ಅಲ್ಲಿ ಧಾರ್ಮಿಕ ಅಂಶಗಳು ಚರ್ಚೆಗೆ ಒಳಗಾಗುವುದು. ಇನ್ನೊಂದು ಸಮಾಜ ಮುಖ. ಇಡೀ ಜೈನ ಸಮುದಾಯವು ಸಾಮಾಜಿಕವಾಗಿ ಸಂಘಟನೆಗೊಳ್ಳುವ ವೇದಿಕೆಯಾಗಿತ್ತು. ಬಹುತೇಕ ಪುರಾಣಗಳಲ್ಲಿ ಸಮವಸರಣಮಂಟಪದಲ್ಲಿ ವರ್ಗ, ವರ್ಣ, ಲಿಂಗಭೇದಗಳಿಲ್ಲದ ಎಲ್ಲರಿಗೂ ಮುಕ್ತವಾದ ಅವಕಾಶಗಳಿದ್ದವು. ಸುರಾಸುರರೆಂಬ ಮನುಷ್ಯ-ಪ್ರಾಣಿಗಳೆಂಬ ಅಂತರವಿರಲಿಲ್ಲ. ಭಿನ್ನಭಾಷೆ ಭಾವಗಳ ಸಂಗಮವಾಗಿತ್ತು. ಜೀವ-ಜೀವಿ ಮಧ್ಯೆ ಯಾವುದೇ ಕಂದರವಿರಲಿಲ್ಲ.



ಸಕಲ ಜೀವರಾಶಿಗಳು ಸಮಾನವಾಗಿ ಪರಿಗಣಿಸಲ್ಪಡುತ್ತಿದ್ದವು. ಮಂಟಪದಲ್ಲಿದ್ದವರು ದುರಾಸೆ, ದುರಾಲೋಚನೆಗಳಿಂದ ಮುಕ್ತರಾಗಿರುತ್ತಿದ್ದರು. ಇದೊಂದು ಜೀವನ ಕರ್ಮಠವಾಗಿದ್ದು ಜ್ಞಾನಶಾಖೆಯಾಗಿತ್ತು. ಅಂತೆಯೇ ಅನೇಕರು ನಡೆಯಲು ಕಲಿತರು, ನುಡಿಯಲು ಹಾಗೂ ಬದುಕಲು ಕಲಿತರು. ಹೀಗಾಗಿ ಸಮವಸರಣಮಂಟಪ ಅತ್ಯಂತ ವೇದಿಕೆಯಾಗಿತ್ತು.

**ಜೈನರ ಸಮವಸರಣಮಂಟಪ - ಅನುಭಾವಮಂಟಪ:**

**ಹಿನ್ನೆಲೆ:**

ಜೈನಮತತತ್ವ ಹಾಗೆಯೇ ವೀರಶೈವಮತತತ್ವಗಳು ಭಿನ್ನ ಭಿನ್ನ ಕಾಲಘಟ್ಟದಲ್ಲಿ ಮೈತಳೆದು ನಿಂತಿದ್ದು, ಜೈನಮತದ ಬೆನ್ನಲ್ಲಿ ವೀರಶೈವ ಹುಟ್ಟಿಕೊಂಡಿರುವುದಕ್ಕೆ ಚಾರಿತ್ರಿಕವಾದ ಸಂಬಂಧವಿದೆ. ಈ ಮತತತ್ವಗಳ ಹಿನ್ನೆಲೆಯ ಚರ್ಚೆ ಏನೇ ಇದ್ದರೂ ಎರಡರ ಆಶಯ ಒಂದೇ ಆಗಿರುವುದು ಗಮನಾರ್ಹ. ಆದರೆ ವ್ಯತ್ಯಾಸವಿಷ್ಟೇ, ಜೈನ ತತ್ವಗಳು ಜಡವಾದಾಗ ಜನಸಾಮಾನ್ಯರಿಗೆ ನಿಲುಕದೇ ಇರುವಾಗ ಮತ್ತು ಬರುಬರುತ್ತ ಜೈನತ್ವ ಕೆಲ ಅವೈಜ್ಞಾನಿಕತೆಗಳನ್ನು ರೂಪಿಸಿಕೊಂಡಂತೆ ಅದು ತನ್ನ ಪ್ರಚಾರತೆ ಕಳೆದುಕೊಳ್ಳಬೇಕಾಗಿ ಬಂತು. ಆದರೆ ಜೈನಮತತತ್ವದ ಪ್ರಭಾವ ವೀರಶೈವರ ಮೇಲಾಗಿಲ್ಲವೆಂದು ಹೇಳಲಿಕ್ಕಾಗದು. ವೀರಶೈವ ಆಧ್ಯಾತ್ಮಿಕ ಸಂಸತ್ತಾಗಿದ್ದು, ಅನುಭಾವಮಂಟಪದ ರಚನೆಯೂ ಜೈನರ ಸಮವಸರಣಮಂಟಪವನ್ನು ಹೋಲುವುದು.

ಜೈನರ ಸಮವಸರಣಮಂಟಪಕ್ಕೂ ವೀರಶೈವರ ಅನುಭಾವಮಂಟಪಕ್ಕೂ ಅನೇಕ ರೀತಿಯ ಸಂಬಂಧಗಳಿವೆ. ರಚನೆ, ಮಾದರಿ, ಉದ್ದೇಶ ಮೊದಲಾದ ಅಂಶಗಳಲ್ಲಿ ಸಾಮ್ಯತೆಗಳಿವೆ. ಅಂತೆಯೇ ಅನುಭಾವಮಂಟಪಕ್ಕೆ ಜೈನರ ಸಮವಸರಣ ಮಂಟಪವೂ ಪ್ರೇರಣೆ ಒದಗಿಸಿದೆ ಎಂದು ಹೇಳಬಹುದು. ಅನುಭಾವಮಂಟಪದ ರಚನೆಯ ಹಿನ್ನೆಲೆಯಲ್ಲಿರುವ ವಾದ-ಜಿಜ್ಞಾಸೆಗಳೇ ಸಮವಸರಣಮಂಟಪ ಕುರಿತೂ ಇವೆ. ಆರಂಭದಲ್ಲಿ ಸಮವಸರಣಮಂಟಪ ಬಯಲಾಗಿತ್ತು. ಅನುಭಾವಮಂಟಪವೂ ಬಯಲೇ ಆಗಿದ್ದು, ಮುಂದೆ ಅವು (ಸಮವಸರಣ ಮಂಟಪ) ಜಿನಾಲಯಗಳಾದಂತೆ ಅನುಭಾವಮಂಟಪ ಮಹಾಮನೆಯಾಗಿ ಶೂನ್ಯಪೀಠವಾಗಿರುವುದು ಗಮನಿಸಬೇಕು. ವೃಷಭಾದಿ ವ್ಯಕ್ತಿಗಳಿರುವಂತೆ ಶರಣರಿದ್ದಾರೆ. ಎರಡೂ ಕಡೆ ತಾತ್ವಿಕ ಸೈದ್ಧಾಂತಿಕ ಚರ್ಚೆ ನೆರವೇರುತ್ತಿದ್ದವು. ಮೇಲ್ನೋಟಕ್ಕೆ ಎರಡೂ ಆಧ್ಯಾತ್ಮಿಕ ನೆಲೆಯೇ ಹೊಂದಿದ್ದರೂ ಮನುಕುಲದ ಒಳಿತಿಗಾಗಿ ಕೈಗೊಳ್ಳಬೇಕಾದ ಕ್ರಮ ಹಾಗೂ ಸಾಮಾಜಿಕ ಸಂಘಟನೆಗೆ ಹೆಚ್ಚು ಒತ್ತು ನೀಡಿರುವುದು ಗಮನಿಸಬೇಕು.

ವೀರಶೈವರಲ್ಲಿ ಬರುವ ೭೭೦ ಅಮರಗಣಂಗಳು, ಮುಕ್ತಾತ್ಮರು, ಅನುಭಾವಿ ಶರಣರು, ಕಾಯಕ-ದಾಸೋಹ ಜೀವಿಗಳು ಮೊದಲಾದ ವಿವರಗಳಿಗೆ ಸಮಾನಾಂತರದಲ್ಲಿ ಜೈನರ ಸಮವಸರಣಮಂಟಪದಲ್ಲಿ ಸತ್ಪರು, ಸಾತ್ವಿಕರು, ಮಹಾಜ್ಞಾನಿಗಳು, ಗಣಗಳು ಕಂಡುಬರುತ್ತಾರೆ.

ಸಮವಸರಣಮಂಟಪದ ರಚನೆಯ ಹಿನ್ನೆಲೆಯೂ ಜೈನ ಪುರಾಣಗಳು ವಿವರಗಳನ್ನು ಒದಗಿಸಿದಂತೆ ವೀರಶೈವ ಕೃತಿಗಳು ಅನುಭಾವಮಂಟಪದ ವಿವರಗಳನ್ನು ಒದಗಿಸುತ್ತವೆ. (ಅನುಭಾವ ಮಂಟಪದ ರಚನೆಯ ಹೆಚ್ಚಿನ ವಿವರಗಳಿಗಾಗಿ: ಅನುಭಾವ ಮಂಟಪ ಅಸ್ತಿತ್ವ ಕುರಿತ ಭಾಗ ಗಮನಿಸಬೇಕು). ಬಹುಮುಖ್ಯವಾಗಿ ಸಮವಸರಣ ಮಂಟಪದ ವಿಸ್ತೀರ್ಣ ನಿಯೋಜನೆಯಾಗಿದ್ದಂತೆ ಅನುಭಾವಮಂಟಪದ ವಿಸ್ತೀರ್ಣವೂ ಅಷ್ಟೇ ಆಗಿದ್ದು ಗಮನಾರ್ಹ.

ಜೈನರಲ್ಲಿ ಕಂಡುಬರುವ ಸಾಂಕೇತಿಕ ಹಾಗೂ ಒಮ್ಮೊಮ್ಮೆ ಅತಿಶಯೋಕ್ತಿ ಸಂಖ್ಯಾವಿವರಗಳು

ಅನುಭಾವ ಮಂಟಪದಲ್ಲಿ ಸಹ ಕಂಡುಬರುತ್ತದೆ. ಸಮವಸರಣ ಮಂಟಪದಲ್ಲಿ ಜಿನ ಮುಖ್ಯವಾದರೆ, ಇಲ್ಲಿ ಜೀವ ಮುಖ್ಯನಾಗುತ್ತಾನೆ. ಸಮವಸರಣ ಮಂಟಪ ಹಾಗೂ ಅನುಭಾವ ಮಂಟಪ ಈ ಎರಡೂ ವೇದಿಕೆಗಳು ಸಮಾನತೆ ಹಾಗೂ ತಾತ್ವಿಕ ತಳಹದಿಯನ್ನು ಹೊಂದಿವೆ. ಹಾಗಾಗಿ ಈ ಎರಡೂ ವೇದಿಕೆಗಳು ವಿಶ್ವಮಾನವ ಪ್ರೇಮವನ್ನೂ ಹೊಂದಿವೆ.

ಇವುಗಳಲ್ಲದೆ ಜೈನರ ಸಮವಸರಣಮಂಟಪಕ್ಕೂ, ಬಸವಾದಿ ಶರಣರ ಅನುಭಾವ ಮಂಟಪಕ್ಕೂ ಇನ್ನೂ ಅನೇಕ ರೀತಿಯ ಸಾಮ್ಯತೆಗಳಿರುವುದನ್ನು ಗಮನಿಸಬಹುದು. ಅವುಗಳನ್ನು ಸ್ಥೂಲವಾಗಿ ಈ ರೀತಿ ಪಟ್ಟಿ ಮಾಡಲಾಗಿದೆ.[೧೦೫]

| ***ಸಮವಸರಣಮಂಟಪ*** | ***ಅನುಭಾವಮಂಟಪ*** |
|---|---|
| ೧. ಜೈನರಲ್ಲಿ ಸಿಂಹಪೀಠದ ಪರಿಕಲ್ಪನೆ ಇದೆ. | ೧. ಶರಣರಲ್ಲಿ ಶೂನ್ಯಪೀಠದ ಪರಿಕಲ್ಪನೆ ಇದೆ. |
| ೨. ತತ್ವ-ಜಿಜ್ಞಾಸೆಯ ಜಿನಮುನಿಗಳಿದ್ದಾರೆ. | ೨. ತಾತ್ವಿಕ ಚಿಂತನೆಯ ನಿವೇದಕರಾಗಿ ಅನುಭಾವಿ ಶರಣರಿದ್ದಾರೆ. |
| ೩. ಲೌಕಿಕ ರಚನೆ ಆಧ್ಯಾತ್ಮಿಕ ಉದ್ದೇಶ ಹೊಂದಿದೆ. | ೩. ಲೌಕಿಕ ರಚನೆ ಆಧ್ಯಾತ್ಮಿಕ ಉದ್ದೇಶ ಹೊಂದಿದೆ. |
| ೪. ಈ ಪರಿಕಲ್ಪನೆಯ ರೂವಾರಿ ವೃಷಭ. | ೪. ಅನುಭಾವ ಮಂಟಪದ ಪರಿಕಲ್ಪನೆಯ ರೂವಾರಿ ಬಸವಣ್ಣ ಮತ್ತು ಅವನ ಒಡನಾಡಿಗಳು. |
| ೫. ಬ್ರಹ್ಮಾಂಡವೇ ಪಿಂಡಾಂಡದ ಪ್ರತಿರೂಪ. | ೫. ಪಿಂಡಾಂಡವೇ ಬ್ರಹ್ಮಾಂಡದ ಪ್ರತಿರೂಪವಾಗಿದ್ದಂತಿದೆ. |
| ೬. ಬಯಲು ವೇದಿಕೆ. | ೬. ಬಯಲು ವೇದಿಕೆ. |
| ೭. ಸಿಂಹಪೀಠವು ತ್ರಿಪೀಠಗಳ ಮೇಲೆ ರಚನೆಯಾಗಿದ್ದು ಮಣಿಖಚಿತವಾದ ಸೋಪಾನಗಳಿವೆ. | ೭. ಶೂನ್ಯಪೀಠವು ಉಪ್ಪರಿಗೆ ಶಿಖರಗಳ ಮೇಲಿದ್ದು ಮಣಿಖಚಿತವಾದ ಷಟ್‌ಸ್ಥಲವೆಂಬ ಸೋಪಾನಗಳನ್ನು ಹೊಂದಿದೆ. |
| ೮. ಸಿಂಹಪೀಠಾಧಿಪತಿ ತೀರ್ಥಂಕರ. | ೮. ಶೂನ್ಯಸಿಂಹಾಸನ ಪೀಠಾಧಿಪತಿ ಅಲ್ಲಮ. |
| ೯. ತೀರ್ಥಂಕರ ಸಹಸ್ರದಳ ಕಮಲದ ಮೇಲೆ ನಾಲ್ಕು ಬೆರಳು ಅಂತರದ ಮೇಲೆ ಆಸೀನ. | ೯. ಅಲ್ಲಮ ಅಷ್ಟದಳ ಕಮಲದ (ಸಹಸ್ರದಳ ಕಮಲವೆಂಬ ವಿಚಾರವೂ ಇದೆ) ಬಯಲು ಗದ್ದುಗೆ ಮೇಲೆ ಆಸೀನ. |
| ೧೦. ತ್ರಿಕಾಲಜ್ಞಾನಿಯ ಸಿಂಹಾಸನ ಪೀಠ. | ೧೦. ಸುಜ್ಞಾನಿಯ ಸಿಂಹಾಸನ, ಶೂನ್ಯಪೀಠ, ಅಂಬರಾಸನ, ಬಯಲು ಸಿಂಹಾಸನ. |
| ೧೧. ಮಂಟಪದ ಒಳಗೆ ಎಂಟು ಮುಖ್ಯ ಭಾಗಗಳು: ಪ್ರಾಕಾರಗಳು, ಗುಡಿಗೋಪುರಗಳು, ಕೋಟೆ, ಧ್ವಜಗಳಿವೆ (ಪುರಾಣಗಳ ಮೂಲದಿಂದ) | ೧೧. ಉಪ್ಪರದ ಗುಡಿ ತೋರಣ, ಅಷ್ಟದ್ವಾರದಂಗಡಿ, ಧ್ವಜ ರಾಜಬೀದಿಗಳುಂಟು (ಶೂನ್ಯ ಸಂಪಾದನೆ ಮೂಲದಿಂದ) |
| ೧೨. ಮಂಟಪದ ಒಳಗೆ ದ್ವಾದಶ ಗುಣಗಳ ಜನರಿರುತ್ತಾರೆ. ಮತ್ತು ಸಕಲ ಜೀವಜಂತುಗಳಿರುತ್ತವೆ. | ೧೨. ಇಲ್ಲಿ ಅವರ ಗಣಂಗಳು ಅನುಭಾವಿ ಶರಣರು ಇರುತ್ತಾರೆ. (ದ್ವಾದಶ ಗಣಗಳ ಉಲ್ಲೇಖವೂ ಬರುತ್ತದೆ. ಆದರೆ ಜೀವರಾಶಿಗಳ ಪ್ರಸ್ತಾಪ ಇಲ್ಲಿಲ್ಲ). |
| ೧೩. ಆಲಯ. ದ್ವಾರ ಮಂಟಪ ಮೊದಲಾದ ಒಳರಚನೆಗಳಿದ್ದು. ಬಯಲು ಜಿನಾಲಯದಂತೆ ಕಂಡುಬರುತ್ತದೆ. | ೧೩. ಆಲಯ, ದ್ವಾರ, ಕಂಬ, ಪೌಳಿ, ಮೇಲುಪ್ಪರಿಗೆ ಆಸನ ಮೊದಲಾದವು ಸೇರಿದ್ದು ಮಂಟಪವನ್ನು ಮಠವೆಂದೂ ಕರೆಯಲಾಗಿದೆ. ಬಯಲು ಗದ್ದುಗೆಯಿದೆ. |
| ೧೪. ಸ್ಫಟಿಕ ಚಂದ್ರಾಕಾಂತಶಿಲೆಯ ಬಳಕೆಯಿದೆ. | ೧೪. ಧವಳಾಲಯವಿದೆ. |
| ೧೫. ಕೆಲ ವರ್ಣನೆಗಳಲ್ಲಿ ಅತಿಶಯತೆ, ಅಲೌಕಿಕತೆಗಳಿವೆ. | ೧೫. ಅತಿಶಯತೆ, ಅಲೌಕಿಕತೆಯೊಂದಿಗೆ ಬೆಡಗಿನ ಛಾಯೆಯಿದೆ. |
| ೧೬. ಇದೊಂದು ಸಾಮಾಜಿಕ ಧಾರ್ಮಿಕ ಸಂಸ್ಥೆ. | ೧೬. ಇದು ಸಮಾಜೋ-ಧಾರ್ಮಿಕ ಶೈಕ್ಷಣಿಕ ಸಂಸ್ಥೆಯಾಗಿದ್ದು, ಸಾಹಿತ್ಯಕೃಷಿ ಸಹ ನೆರವೇರುತ್ತಿತ್ತು. |
| ೧೭. ಇದೊಂದು ವ್ಯವಸ್ಥಿತವಾದ ಯೋಜನೆಯ ಮಾದರಿಯಂತಿದೆ. | ೧೭. ಇಡೀ ಕಲ್ಯಾಣಪುರವೇ ಸಾಕ್ಷಿಯಾಗಿದ್ದು ಮಹಾಮನೆಗಳೇ ಅನುಭಾವಮಂಟಪಗಳಾಗಿದ್ದವು. |
| ೧೮. ದಿವ್ಯ ಧ್ವನಿ. | ೧೮. ಮಾತೆಂಬುದು ಜ್ಯೋತಿರ್ಲಿಂಗ. |
| ೧೯. ಮೂರ್ತರೂಪದ (ಜಿನಾಲಯ) ಪರಿಕಲ್ಪನೆ | ೧೯. ಅಮೂರ್ತರೂಪದ (ಅನುಭಾವಮಂಟಪದ ಸಂಸ್ಥೆ) ಪರಿಕಲ್ಪನೆ. |

ಹೀಗೆ ಹಲವಾರು ಅಂಶಗಳಲ್ಲಿ ಸಾಮ್ಯತೆ ಕಂಡುಬಂದಿದ್ದರೂ ಈ ಎರಡೂ ವೇದಿಕೆಗಳ ಕಾಲಘಟ್ಟಗಳು ಮಾತ್ರ ಭಿನ್ನಭಿನ್ನವಾದವುಗಳಾಗಿವೆ. ಭಿನ್ನ ಭಿನ್ನ ಧಾರ್ಮಿಕ ಸಿದ್ಧಾಂತಗಳನ್ನು ರೂಪಿಸಿಕೊಂಡವುಗಳಾಗಿವೆ. ಹಾಗಾಗಿ ಈ ಎರಡೂ ಧ್ರುವಗಳು ಎಲ್ಲೋ ಒಂದೆಡೆ ಸೇರಿದಂತೆ ಕಂಡುಬಂದರೆ ಅದು ಅತಿಶಯೋಕ್ತಿ ಏನಲ್ಲ. ಸಾಮಾನ್ಯವಾಗಿ ವೀರಶೈವ ಎಂದರೆ ಸರ್ವ-ಧರ್ಮ-ತತ್ವ ಸಿದ್ಧಾಂತಗಳ ಸಾರರೂಪವಾಗಿ ಪ್ರತ್ಯೇಕ ತತ್ವ ಸಿದ್ಧಾಂತಗಳನ್ನು ರೂಪಿಸಿಕೊಂಡಿದೆ. ಹಲವಾರು ಸಿದ್ಧಾಂತಗಳು ಇದರಲ್ಲಿ ಅಡಕವಾಗಿವೆ. ಜೈನಧರ್ಮವೂ ಇದಕ್ಕೆ ಹೊರತಾಗಿಲ್ಲ.

●

*"ಕೂಡಲಸಂಗಮ, ನಂ. ೧೨-೧೧-೫೬೩/೧, ಚೆನ್ನಬಸವ ನಗರ, ಕರ್ನಾಟಕ ಕಾಲೇಜು ಹಿಂದೆ,*
*ಬೀದರ - ೫೮೫ ೪೦೧ ೯೭೩೮೪ ೧೮೪೬೮*

ನಡೆನೋಟ ಸೊಲ್ಲೆಡೆಯಲ್ಲಿ ಒಂದು ಕಿಚ್ಚು
ಮಡದಿ ಪುರುಷರೆಡೆಯಲ್ಲಿ ಒಂದು ಕಿಚ್ಚು
ತಡದುಂಬೆಡೆಯಲ್ಲಿ ಒಂದು ಕಿಚ್ಚು
ಪಡೆದರ್ಥಕೆಟ್ಟೆಡೆಯಲ್ಲಿ ಒಂದು ಕಿಚ್ಚು
ಇಂತೀ ಐದು ಕಿಚ್ಚ ನಿಕ್ಕಿ
ಬಾಯಲ್ಲಿ ಮಣ್ಣ ಹೊಯಿದು ಕೆಡಿಸಿದೆ ಕಾಣಾ ರಾಮನಾಥ

– ಜೇಡರ ದಾಸಿಮಯ್ಯ

## ಒಂದು ವಚನ ~ ಎರಡು ನೋಟ

ಡಾ. ನೆಲ್ಕುಂಟೆ ವೆಂಕಟೇಶ್ ಅವರು ಹಿರಿಯ ಕೆ.ಎ.ಎಸ್. ಅಧಿಕಾರಿಯಾಗಿದ್ದು, ತಮ್ಮ ಜನಪರ ನಿಲುವುಗಳಿಗಾಗಿ ಖ್ಯಾತರಾಗಿದ್ದಾರೆ. ಕನ್ನಡ ಸಾಹಿತ್ಯ ಮತ್ತು ಸಾಮಾಜಿಕ ಅಧ್ಯಯನಗಳು ಇವರ ಮುಖ್ಯ ಆಸಕ್ತಿಯ ಕ್ಷೇತ್ರಗಳಾಗಿವೆ. ಕನ್ನಡ ಸಾಹಿತ್ಯದ ಗಂಭೀರ ವಿದ್ಯಾರ್ಥಿಯಾದ ಇವರು ತಮ್ಮ ಪ್ರಖರ ಚಿಂತನೆಯ ಅನೇಕ ಬರಹಗಳನ್ನು ಪ್ರಕಟಿಸಿದ್ದು, ಅವು ಅಪಾರ ಜನಮನ್ನಣೆ ಪಡೆದಿವೆ.

ಶ್ರೀಮತಿ ಪ್ರೇಮಾ ಅವರು ಸರ್ಕಾರಿ ಆರ್.ಸಿ. ಪ್ರಥಮ ದರ್ಜೆ ಕಾಲೇಜಿನಲ್ಲಿ ಅಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಪಿಹೆಚ್.ಡಿ. ಅಧ್ಯಯನದಲ್ಲಿ ತೊಡಗಿಕೊಂಡಿರುವ ಇವರು ಹಲವಾರು ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರೆ.

**ಗೋತ್ರನಾಮವ ಬೆಸಗೊಂಡಡೆ**
**ಮಾತು ನೂಂಕದೆ ಸುಮ್ಮನಿದ್ದಿರಿದೇನಯ್ಯಾ?**
**ತಲೆಯ ಕುತ್ತಿ ನೆಲನ ಬರೆವುತ್ತಿದ್ದಿರಿದೇನಯ್ಯಾ?**
**ಗೋತ್ರನಾಮ, ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯನೆಂಬುದೇನು,**
**ಕೂಡಲಸಂಗಯ್ಯಾ.**

**– ಬಸವಣ್ಣ**

# ನ್ಯಾಯ ನಿಷ್ಠುರಿ ಬಸವಣ್ಣ

## ಡಾ. ನೆಲ್ಕುಂಟೆ ವೆಂಕಟೇಶ್

ಗೋತ್ರ, ಜಾತಿ ಮತ್ತು ಕುಲಗಳ ಅತ್ಯಂತ ಸಂಕೀರ್ಣವಾದ ಸಾಮಾಜಿಕ ಸಂರಚನೆ ಭಾರತದಲ್ಲಿದೆ. ವೃತ್ತಿ, ಬುಡಕಟ್ಟು ನೆಪದಲ್ಲಿ ಮತ್ತು ಹಲವು ರಾಜಕೀಯ– ಧಾರ್ಮಿಕ ಹುನ್ನಾರಗಳಿಂದ ಮನುಷ್ಯನ ಹುಟ್ಟಿನ ಆಧಾರದ ಮೇಲೆ ಜಾತಿಗಳನ್ನು ರೂಪಿಸಲಾಗಿದೆ. ಇಲ್ಲಿ ಕೆಲವು ಜಾತಿಗಳಿಗೆ ಹುಟ್ಟಿನಿಂದಲೆ ಬಹಳ ದೊಡ್ಡ ಚೈತನ್ಯ ಮತ್ತು ಘನತೆಯ ಅಸ್ತಿತ್ವ ಸಾಧ್ಯವಾಗುವುದಾದರೆ, ಹಲವು ಜಾತಿಗಳಿಗೆ ಅವಮಾನ, ಸೋಲು ಮತ್ತು ಬಿಡುಗಡೆಯೇ ಇಲ್ಲದ ದಾಸ್ಯ ಮನಸ್ಥಿತಿ ಬೆನ್ನಿನ ಮೇಲೆ ಕೂತು ವಾರಸುದಾರಿಕೆಯನ್ನು ಒತ್ತಾಯಿಸುತ್ತವೆ. ಹುಟ್ಟಿನಿಂದಲೇ ಮನುಷ್ಯರನ್ನು ಒಳಗೊಳ್ಳುವ ಮತ್ತು ಹೊರಗಿಡುವ ಭೀಕರ ರಾಜಕಾರಣದ ಭಾಗವಾಗಿ ಮನುಷ್ಯನ ಘನತೆಯೇ ತಲೆಬಾಗುವಂಥ ವಾತಾವರಣ ಇಲ್ಲಿ ನಿರ್ಮಾಣವಾಗಿದೆ.

ಇಂಥ ವಿಷದ ವಾತಾವರಣದಲ್ಲಿ ಬದುಕಿದ್ದ ಬಸವಣ್ಣ, ಹೆಪ್ಪುಗಟ್ಟಿದ್ದ ರೋಗಕಾರಕ ಕೆನೆಯನ್ನು ನಿವಾರಿಸಬೇಕಾದರೆ ಅನಿವಾರ್ಯವಾಗಿ ಹುಟ್ಟಿನ ಮೂಲದ ಶ್ರೇಷ್ಠ–ಕನಿಷ್ಠಗಳೆಂಬ ಸಾಯುವವರೆಗೆ ಬೆನ್ನತ್ತಿ ಬರುವ ಸಂಗತಿಗಳನ್ನು ನಿರಾಕರಿಸಬೇಕಾಗಿತ್ತು.



ಈ ವಚನದಲ್ಲಿ ಬಸವಣ್ಣ ನೋವು, ಸಿಟ್ಟು, ಹತಾಶೆ, ವಿಷಾದ ಭಾವಗಳು ಸ್ಫೋಟಗೊಳ್ಳುವುದರ ಜೊತೆಯಲ್ಲಿಯೇ ಕುಲ–ಗೋತ್ರ ವ್ಯಾಖ್ಯಾನಗಳಿಗೆ ಪರ್ಯಾಯವಾದ ಚಿಂತನೆಗಳನ್ನು ಮಂಡಿಸುತ್ತಿದ್ದಾನೆ. ಈ ವಚನಕ್ಕೆ ಮೂರು ಆಯಾಮಗಳಿವೆ. ಒಂದು, ಹಳೆಯ ಕುಲ ಗೋತ್ರಗಳ ಕುರಿತ ವ್ಯಾಖ್ಯಾನದ ನಿರಾಕರಣೆ. ಎರಡು, ಹುಟ್ಟು ಎಂಬುದು ಜೈವಿಕ ಕ್ರಿಯೆ. ಅದು ತನ್ನಷ್ಟಕ್ಕೆ ತಾನು ಶ್ರೇಷ್ಠವೂ ಅಲ್ಲ, ಕನಿಷ್ಠವೂ ಅಲ್ಲ. ಮೂರು, ವೃತ್ತಿ ಮತ್ತು ಕುಲಗಳ ಕುರಿತಂತೆ ಹೊಸ ಪರಿಕಲ್ಪನೆಯ ನಿರ್ಮಾಣ. ನಿರಾಕರಣೆ, ನಿರಚನೆ ಮತ್ತು ಪರ್ಯಾಯಗಳ ನಿರ್ಮಾಣ ಚಳುವಳಿಯೊಂದರ ಪ್ರಧಾನ ಆಶಯವಾಗಿರಬೇಕು. ಕಾಲದ ಅಗತ್ಯಕ್ಕೆ ಬೇಕಾದ ವಾತಾವರಣವನ್ನು ನಿರ್ಮಿಸಿಕೊಳ್ಳಬೇಕು. ಪ್ರತಿಕಾಲಕ್ಕೂ ಒಂದು ಯುಗಧರ್ಮವಿರುತ್ತದೆ. ೧೨ನೇ ಶತಮಾನದ ಯುಗಧರ್ಮವು ಕುಶಲಕರ್ಮಿ ಸಮುದಾಯಗಳ ಬದುಕಿನ ಘನತೆಯನ್ನು ಪ್ರತಿಪಾದಿಸುತ್ತದೆ. ಬೆವರಿನ ದುಡಿಮೆಗೆ ಘನತೆ ಇರಬೇಕು ಎಂಬ ರಾಜಕೀಯಾರ್ಥಿಕ ಪ್ರಮೇಯ ಪಶ್ಚಿಮಕ್ಕೆ ಸೀಮಿತವಾದುದಲ್ಲ.

ಸ್ವತಃ ಬಸವಣ್ಣನೇ ದುಡಿಮೆಯ ಘನತೆಯನ್ನು ಪ್ರತಿಪಾದಿಸುತ್ತಿದ್ದಾನೆ. ಸನಾತನವಾದಿಗಳು ಅಥವಾ ಮೂಲಭೂತವಾದಿಗಳು ಬಹುಶಃ ಬಸವಣ್ಣನ ಹುಟ್ಟನ್ನು ಅವಮಾನಿಸಿರಬಹುದು. ಕುಲ ಗೋತ್ರಗಳ ಕುರಿತು ಕಟಕಿಯಾಡಿರಬಹುದು. ಅದಕ್ಕೆ ಪ್ರತಿಕ್ರಿಯೆಯಾಗಿ ಕೂಡ ಈ ವಚನ ರೂಪುಗೊಂಡ ಹಾಗೆ ಕಾಣುತ್ತದೆ. ಹುಟ್ಟಿನ ಕುರಿತು ಬಸವಣ್ಣ ಬಹುಶಃ ಚಳುವಳಿಯ ಆರಂಭ ಕಾಲಕ್ಕೆ ಶ್ರೇಷ್ಠತೆಯನ್ನು ನಿರಾಕರಿಸುವ ಕ್ರಾಂತಿಕಾರಕವೆನ್ನಿಸುವ ನಿಲುವು ತೆಗೆದುಕೊಂಡಿದ್ದಾನೆ. ಆತ ಪದೇ ಪದೇ ಹೇಳುವ ಮಾತು 'ಚೆನ್ನಯ್ಯನ ಮನೆಯ ದಾಸನ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು, ಇವರಿಬ್ಬರು ಹೊಲದಲು ಬೆರಣಿಗೆ ಹೋಗಿ, ಸಂಗವ ಮಾಡಿದರು. ಇವರಿಬ್ಬರಿಗೆ ಹುಟ್ಟಿದ ಮಗ ನಾನು, ಕೂಡಲ ಸಂಗಮದೇವ ಸಾಕ್ಷಿಯಾಗಿ' ಎಂದು ಬಿಡುತ್ತಾನೆ. ಹಾಗಾಗಿ ಗೋತ್ರ ನಾಮವೆಂದರೆ ಅದು ಮಾದಾರ ಚೆನ್ನಯ್ಯ ಮತ್ತು ಡೋಹರ ಕಕ್ಕಯ್ಯನದು ಎಂಬುದು ಬಸವಣ್ಣನ ನಿಲುವು. ಕಶ್ಯಪ, ಭಾರದ್ವಾಜ ಗೋತ್ರಗಳಿಗಿಂತ ಮಿಗಿಲಾದ ಗೋತ್ರಗಳಿವು ಎಂಬ ನಿಲುವು ಬಸವಣ್ಣನದು.

ದುಡಿದು ಬದುಕುವ, ಕಾಯಕ ಮಾಡಿ ಬದುಕುವ, ನೆಲದ ಸಂಪತ್ತನ್ನು ಹೆಚ್ಚಿಸುವ ಚೆನ್ನಯ್ಯ, ಕಕ್ಕಯ್ಯನಂಥವರ ಗೋತ್ರದೊಂದಿಗೆ ಗುರುತಿಸಿಕೊಳ್ಳುವುದನ್ನು ಬಸವಣ್ಣ ಹೆಮ್ಮೆಯ ಸಂಗತಿಯೆಂದು ಭಾವಿಸುತ್ತಾನೆ. ವೈದಿಕ ಸಂಸ್ಕೃತಿಯು ಕಶ್ಯಪ, ವಶಿಷ್ಠ, ಭಾರದ್ವಾಜ ಮುಂತಾದವರು ಬಹಳ ಮುಖ್ಯ ಗೋತ್ರ ಪುರುಷರು ಎಂದು ಗರ್ವ ಪಡುತ್ತಿದ್ದ ಸಂದರ್ಭದಲ್ಲಿ ಬಸವಣ್ಣ ಶರಣ ಸಂಸ್ಕೃತಿಗೆ ಪರ್ಯಾಯ ಗೋತ್ರ ಪುರುಷರನ್ನು ತೋರಿಸುತ್ತಿದ್ದಾನೆ. ಇದನ್ನೆ ಪರ್ಯಾಯ ಸಂಸ್ಕೃತಿ ಎನ್ನುವುದು. ವ್ಯಕ್ತಿಗತ ಅಪವರ್ಗೀಕರಣದ ಮೂಲಕ ಶ್ರಮಸಂಸ್ಕೃತಿಗೆ ಘನತೆ ಕಟ್ಟುವ ಬಸವಣ್ಣ ಚಳುವಳಿಗೂ ಸಹ ದೃಕ್ಪಥವೊಂದನ್ನು ನಿರ್ಮಿಸುತ್ತಾನೆ.

ಹುಟ್ಟು ಎನ್ನುವುದು ಜೈವಿಕ ಕ್ರಿಯೆ. ದಾಸ ದಾಸಿಯರ ಮಗ ನಾನು ಎನ್ನುವಾಗ ಗಂಡು ಹೆಣ್ಣುಗಳಿಬ್ಬರೂ ಶಿವಶಿವೆಯರೇ ಎಂಬ ವಿಶಾಲಭಿತ್ತಿಯ ಕಡೆಗೆ ಹುಟ್ಟನ್ನು ವಿಸ್ತರಿಸುತ್ತಾನೆ. ಈ ದೃಷ್ಟಿಯಲ್ಲಿ ಎಲ್ಲರ ಹುಟ್ಟು ಏಕರೂಪಿಯಾದುದು. ಎಲ್ಲರ ಹುಟ್ಟಿಗೂ ಘನತೆ ಇದೆ. ದ್ವಿಜರಾಗುವ ಆಚರಣೆಯ ಮೂಲಕ ಸಮಾಜವನ್ನು ಒಡೆದು ಹಾಕುವ ಕ್ರಮ ಎನ್ನುವುದು ಬಸವಣ್ಣನ ನಿಲುವು.

ಯಾವುದೇ ಚಳುವಳಿ, ಯಾವುದೇ ಸಮಾಜಮುಖಿಯಾದ ಮನುಷ್ಯ ತನ್ನನ್ನು ತಾನು ಅಪವರ್ಗೀಕರಿಸಿಕೊಳ್ಳದೆ ಹೋದರೆ ಸ್ಫೂರ್ತಿಯೆಂಬುದು ನೈಜವಾಗಿರುವುದಿಲ್ಲ ಎಂಬ

ವಿಚಾರಗಳು ಈ ಎಲ್ಲರ ನಡೆಗಳಿಂದ ಅರ್ಥವಾಗುತ್ತದೆ. ಇದಕ್ಕೆ ಬಸವಣ್ಣ ದೊಡ್ಡ ಮಾದರಿ. ಪರಿಕಲ್ಪನೆ ಸಿಟ್ಟು ಮತ್ತು ನೋವುಗಳು ತುಳುಕುತ್ತಿರುವ ಈ ವಚನದಲ್ಲಿ ಬಸವಣ್ಣನವರು

ನಂ. ೩, ನುಡಿ, ೧ನೇ ಎ ಮುಖ್ಯರಸ್ತೆ, ಮುನೇಶ್ವರ ಲೇಔಟ್, ೪ನೆ ಬ್ಲಾಕ್, ಡಿ.ಬಿ. ಸಂದ್ರ,
ಬೆಂಗಳೂರು ೫೬೦ ೦೯೭ ೯೪೪೪೮ ೪೩೯೬೦

# ಬಸವಣ್ಣನವರ ಪ್ರಗತಿಪರ ನಿಲುವು

## ಶ್ರೀಮತಿ ಪ್ರೇಮಾ

ಕರ್ಮಠ ವೈದಿಕ ಸಮಾಜದ ಮುಖ್ಯ ಶಕ್ತಿ ಇರುವುದು ಮನುಷ್ಯನ ಹುಟ್ಟನ್ನು ನಿರಾಕರಿಸುವುದರಲ್ಲಿ ಮತ್ತು ಘನತೀಕರಿಸುವುದರಲ್ಲಿ. ಸಹಜ ಜೈವಿಕ ಕ್ರಿಯೆಯ ಮೂಲಕ ಘಟಿಸುವ ಹುಟ್ಟನ್ನು ತನ್ನ ರಾಜಕೀಯ ಧಾರ್ಮಿಕ ಹಿತಾಸಕ್ತಿಗಳಿಗೆ ಬಳಸಿಕೊಂಡು ಸಮಾಜದ ಚೈತನ್ಯ ಸಮಸ್ತವನ್ನೂ ತುಳಿದು ಮೆಟ್ಟಿದ ಕೀರ್ತಿ ವೈದಿಕ ಸಮಾಜಕ್ಕೆ ಸಲ್ಲುತ್ತದೆ. ಬಸವಣ್ಣನವರ ಕಾಲದಲ್ಲಿ ಧರ್ಮದ ಎಂಬುದು ಆಚಾರ ವಿಚಾರಗಳಿಗೆ ಸಂಬಂಧಿಸಿದ ವಿಚಾರ. ಇವತ್ತಿನ ಅರ್ಥದಲ್ಲಿ ಹಿಂದೂ ಮುಸ್ಲಿಂ ಮುಂತಾದ ಸಾಂಸ್ಥಿಕ ರಚನೆಗಳು ಬಸವಣ್ಣನವರ ಕಾಲದಲ್ಲಿ ಚಾರಿತ್ರಿಕವಾಗಿ ಇದ್ದರೂ ಕೂಡ "ಕುಲದ ನೆಲೆಯಲ್ಲೆ ವ್ಯಾಖ್ಯಾನ ಮಾಡಲಾಗುತ್ತದೆ. ಕುಲ ಜಾತಿಗಳು ತುಸು ಹೆಚ್ಚೂ ಕಡಿಮೆ ಏಕಾರ್ಥದಲ್ಲಿ ಬಳಕೆ ಮಾಡುವಂತೆ ಕಾಣುತ್ತದೆ. ಜಾತಿಗಳು ಸಮಾಜವನ್ನು ಆಳವಾಗಿ ವಿಭಜಿಸಿದ್ದರೆ ಗೋತ್ರಗಳು ಇನ್ನೂ ಆಳಕ್ಕೆ ಇಳಿದು ಪ್ರತ್ಯೇಕತೆಯನ್ನು ಕಾಯ್ದುಕೊಳ್ಳುತ್ತವೆ. ಜಾತಿಯೆಂಬುದು ಕಟ್ಟುನಿಟ್ಟಾಗಿ ಆಚರಣೆಗೊಳ್ಳುವುದು ಒಳಬಾಂಧವ್ಯ ವಿವಾಹ ವ್ಯವಸ್ಥೆ ಮತ್ತು ಆಹಾರ ಪದ್ಧತಿಗಳ ಮೇಲೆ. "ಭಾರತದಲ್ಲಿ ಒಳಬಾಂಧವ್ಯ ವ್ಯವಸ್ಥೆಯನ್ನು ಆಚರಿಸುತ್ತಿರುವ ಸುಮಾರು ೪೦ ಸಾವಿರ ಪಂಗಡಗಳಿವೆ. ಇವುಗಳು ಬಹುಮಟ್ಟಿಗೆ ಗೋತ್ರಗಳೇ ಆಗಿರಬೇಕು. ಒಡೆದುಹೋದ ಸಮಾಜದಲ್ಲಿ ಬಸವಣ್ಣ ಈ ವಚನವನ್ನು ನುಡಿದಿದ್ದಾನೆ. ವಚನದಲ್ಲಿ ಮೇಲ್ನೋಟಕ್ಕೆ ಅಪಾರ ಸಿಟ್ಟು ಮತ್ತು ವಿಷಾದ ಕಾಣುತ್ತದೆ. ಕೂಡಲಸಂಗಯ್ಯಾ ಎಂಬ ಪದದಲ್ಲಿ ಅಯ್ಯಾ ಎಂಬುದು ಅತ್ಯಂತ ಆರ್ತವಾದ ನುಡಿಯಂತೆ ಕೇಳಿಸುತ್ತದೆ. ಕುಲದ ಪ್ರಶ್ನೆಗೆ ಉತ್ತರಿಸಲಾಗದೆ ತಲೆಬಾಗಿಸಿ, ದಯನೀಯವಾಗಿ ನಿಂತಿದ್ದು ಬಂದವರನ್ನು ಕುರಿತು ನುಡಿವ ನುಡಿಯಂತೆ ಈ ವಚನ ಕಾಣಿಸುತ್ತದೆ. ಯುದ್ಧದಲ್ಲಿ ಸೋತು ನಿಂತವರನ್ನು ಹುರಿದುಂಬಿಸಿ ಎದೆ ಸೆಟಸಿ, ತಲೆ ಎತ್ತಿ ನಿಲ್ಲುವಂತೆ ಮಾಡುವ ದಂಡನಾಯಕನಂತೆಯೂ ಬಸವಣ್ಣ ಕಾಣಿಸುತ್ತಾನೆ. ವಚನ ಚಳುವಳಿ ಒಂದರ್ಥದಲ್ಲಿ ವೈದಿಕ ಮೂಲಭೂತವಾದದ ವಿರುದ್ಧ ಘೋಷಿಸಿದ ಯುದ್ಧವೇ ಆಗಿತ್ತು ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಪ್ರಧಾನವೆಂದು ಕರೆಸಿಕೊಂಡು ತಾರತಮ್ಯವನ್ನು ನಿಯಮ ಮಾಡಿಕೊಂಡಿದ್ದ ಸಂಸ್ಕೃತಿಯ ವಿರುದ್ಧ ಘೋಷಿಸಿದ ಯುದ್ಧ ಅದು. ವೈದಿಕ ಸಂಸ್ಕೃತಿಯ ಸಂಕೇತ ವ್ಯವಸ್ಥೆಗೆ, ಆಚಾರ ವಿಚಾರಗಳಿಗೆ ಪರ್ಯಾಯವಾದ ಸಂಗತಿಗಳನ್ನು ವಚನಕಾರರು ಮಂಡಿಸಿದರು. ವೈದಿಕ ಸಂಸ್ಕೃತಿಯು ತಲೆಯ ಭಾಗದಿಂದ ಸಮಾಜದ ಸಂರಚನೆಯನ್ನು ವಿವರಿಸಿದರೆ ವಚನ ಸಂಸ್ಕೃತಿಯು ಪಾದಕ್ಕಿಂತಲೂ ಕೆಳಗಿನ ಸ್ತರದ ದಮನಿತರ ಮೂಲಕ ಸಮಾಜ ವ್ಯವಸ್ಥೆಯನ್ನು ನಿರ್ವಚಿಸಲು ಪ್ರಯತ್ನಿಸಲಾಗಿದೆ. ಮಾದಾರ ಚೆನ್ನಯ್ಯ ಮತ್ತು ಡೋಹರ ಕಕ್ಕಯ್ಯನ ಮನೆಯ ದಾಸ ದಾಸಿಯರ ಮಕ್ಕಳ ಸಂಗದಿಂದ ನಾನು ಹುಟ್ಟಿದೆ ಎನ್ನುವ ಬಸವಣ್ಣ ಜಾತಿ, ಕುಲ ಗೋತ್ರಗಳ ಅಹಂಕಾರವನ್ನು ಒಡೆದು ಹಾಕುತ್ತಾನೆ. ಚೆನ್ನಯ್ಯ, ಕಕ್ಕಯ್ಯರೆಂಬ ದಮನಿತ



ನೆಲೆಗೆ ಸೇರಿದ ವಚನಕಾರರ ಮೂಲಕ ಗೋತ್ರದ ವಿವರಿಸುತ್ತಾನೆ. ವೈದಿಕ ಶಾಹಿಗಳೋ ಇಲ್ಲ ಜಾತಿ ವ್ಯವಸ್ಥೆಯ ಸಮರ್ಥಕರೋ ಬಸವಣ್ಣನ, ವಚನಕಾರರ ಗೋತ್ರವನ್ನು ಭಂಗಿಸಿ ಹಂಗಿಸಿರಬೇಕು. ಅದನ್ನು ಎದುರಿಸಲಾರದೆ ಬಂದ ಒಡನಾಡಿಗಳಿಗೆ ಬಸವಣ್ಣ ಈ ಮಾತುಗಳನ್ನು ಹೇಳಿದ ಹಾಗೆ ಕಾಣಿಸುತ್ತದೆ. ಬಸವಣ್ಣನ ಈ ನಿಲುವು ವಚನ ಚಳುವಳಿಗೆ ಬಹುದೊಡ್ಡ ಚೈತನ್ಯವನ್ನು ದಕ್ಕಿಸಿ ಕೊಟ್ಟ ಹಾಗೆ ಕಾಣಿಸುತ್ತದೆ. "ದುಡಿಮೆಯನ್ನು ಗೌರವಿಸುವ, ಶ್ರಮವನ್ನು ಘನತೀಕರಿಸುವ ಪ್ರಯತ್ನಗಳ ಭಾಗವಾಗಿ ವಚನ ಚಳುವಳಿಯನ್ನು ನೋಡಬಹುದಾಗಿದೆ. ಅಷ್ಟರಮಟ್ಟಿಗೆ ವಚನ ಚಳುವಳಿ ಸಾಮಾಜಿಕ-ರಾಜಕೀಯ-ಧಾರ್ಮಿಕ ಆಶಯಗಳ ಪರ್ಯಾಯಗಳ ಚಿಂತನೆ. ದುಡಿಮೆಯ ಘನತೆಯನ್ನು ನಿರಾಕರಿಸುವ ಸಮಾಜಕ್ಕೆ ಯಾವ ದಿಕ್ಕಿನಿಂದ ನೋಡಿದರೂ ಭರವಸೆಯಿಲ್ಲ ಎಂಬುದನ್ನು ಬಸವಣ್ಣ ಹಾಗೂ ವಚನಕಾರರು ಅರ್ಥಮಾಡಿಕೊಂಡ ಹಾಗೆ ಕಾಣಿಸುತ್ತದೆ. ಜಾತಿಗಳೆಲ್ಲವೂ ವೃತ್ತಿ ಮೂಲದವು. ಆದರೆ ವೃತ್ತಿಗಳನ್ನು ಕೀಳುಗಳೆದು ದಮನಿಸಿರುವುದರಿಂದ ಜಾತಿಗಳೂ ದಮನಕ್ಕೆ ತುತ್ತಾಗಿವೆ. ಹಾಗಾಗಿ ವೃತ್ತಿಗಳಿಗೆ ಘನತೆ ಬಂದರೆ ತನ್ನಿಂದ ತಾನೆ ಜಾತಿಗಳಿಗೂ ಘನತೆ ದಕ್ಕುತ್ತದೆ ಎಂಬ ನಿಲುವು ವಚನಕಾರರದಿರಬಹುದು."ಪಿತ್ರಾರ್ಜಿತ ಆಸ್ತಿಯಂತೆ ಬರುವ ಜಾತಿ, ಕುಲ, ಗೋತ್ರಗಳನ್ನು ನಿರಾಕರಿಸಿ ಹೊಸ ಗೋತ್ರ ಪುರುಷರನ್ನು ಪ್ರತಿಷ್ಠಾಪಿಸುವುದು ಸಾಧಾರಣ ಸಂಗತಿಯಲ್ಲ." ಜಾತಿ ಕುಲಗಳ ವಿಚಾರದಲ್ಲಿ ಬಸವಣ್ಣ ಅಪ್ರತಿಮ ಕ್ರಾಂತಿಕಾರಕ ನಿಲುವುಳ್ಳವನು ಎಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಆದರೆ ಲಿಂಗ ತಾರತಮ್ಯದ ವಿಚಾರಕ್ಕೆ ಬಂದರೆ ಆತನೂ ಕೂಡ ಪುರುಷ ಸಂಸ್ಕೃತಿಯ ಪ್ರತಿಪಾದಕನಂತೆಯೇ ಕಾಣಿಸುತ್ತಾನೆ ಎಂಬುದು ನೋವಿನ ಸಂಗತಿ. ಈ ವಚನದಲ್ಲೂ ಸಹ ಗೋತ್ರ ನಿರ್ಧರಿಸುವಾಗ ಚೆನ್ನಯ್ಯ, ಕಕ್ಕಯ್ಯ ಎನ್ನುತ್ತಾನೆಯೇ ಹೊರತು ದುಗ್ಗವ್ವೆಯೊ, ಸಂಕವ್ವೆಯೋ ಇದ್ದಾಳೆ ಎಂಬ ಅರಿವು ಕಾಡುವುದಿಲ್ಲ. ಇದು ದುರಂತ. ಇದು ಬಸವಣ್ಣನ ಮಿತಿ. ಲಿಂಗ ತನ್ನ ಪತಿಯೆಂದು ತಾನು ಸತಿಯೆಂದು ಕರೆದುಕೊಳ್ಳುವ ಬಸವಣ್ಣನ ನಿಲುವನ್ನು ಆತನ ಮಡದಿ ನೀಲಾಂಬಿಕೆ ಪ್ರತಿಭಟಿಸುತ್ತಾಳೆ. ಸತಿಯೆಂದು ಕರೆದುಕೊಂಡವನ ಸತಿ ತಾನಾಗಲಾರೆ ಎನ್ನುತ್ತಾಳೆ. ಇದು ಬಸವಣ್ಣನ ಜೀವಿತ ಕಾಲದಲ್ಲಿಯೇ ದಾಖಲಾದ ಪ್ರತಿಭಟನೆ. ಹೆಣ್ಣಿನ ಅಸ್ತಿತ್ವ ನಿರಾಕರಿಸುವ ಮೊದಲ ಹಂತದ ಗಾಂಧಿಯಂತೆ ಬಸವಣ್ಣ ಕಾಣುತ್ತಾನೆ. ಈ ವಚನದಲ್ಲೂ ಅದೇ ನಿಲುವಿದೆ.

***ಪರಾಮರ್ಶನ ಗ್ರಂಥಗಳು:***

೧. ಡಾ. ಎಂ. ಎಂ. ಕಲಬುರ್ಗಿ, ಮಾರ್ಗ, ಸಂಪುಟ-೩, ಸ್ವಪ್ನ ಬುಕ್ ಹೌಸ್, ಬೆಂಗಳೂರು, ಜೂನ್ ೨೦೧೮ ಪುಟ ಸಂಖ್ಯೆ ೪೭೨ ರಿಂದ ೪೭೫

೨. ಶಂಕರ ಮ. ಪಾಟೀಲ, ವಚನ ವೈಭವ, ಸಂಗಮ ಪ್ರಕಾಶನ,ಮೈಸೂರು, ೨೦೧೩, ಪುಟ ಸಂಖ್ಯೆ ೧೦೫ ರಿಂದ ೧೧೩

೩. ಡಾ. ಎಂ. ಚಿದಾನಂದಮೂರ್ತಿ, ಬಸವಣ್ಣನವರು, ಸಂವಹನ ಪ್ರಕಾಶನ, ಮೈಸೂರು, ೨೦೧೪ ಪುಟ ಸಂಖ್ಯೆ ೬೮

೪. ಶ್ರೀ ಬಸವೇಶ್ವರರು, ಬಸವೇಶ್ವರ ೮ನೇ ಶತಮಾನೋತ್ಸವ ಸಮಿತಿ, ಮೈಸೂರು ಸರಕಾರ, ಬೆಂಗಳೂರು, ೧೯೬೭, ಪುಟ ಸಂಖ್ಯೆ ೩೪

೫. ಪ್ರೊ. ಎಸ್. ಜಿ. ಸಿದ್ಧರಾಮಯ್ಯ, ವಚನ ಧರ್ಮ, ಅರಿವಿನ ಬೆರಗು, ಅಖಿಲ ಭಾರತ ಶರಣ ಪರಿಷತ್ತು, ಮೈಸೂರು, ೨೦೧೯, ಪುಟ ಸಂಖ್ಯೆ ೬೦ ರಿಂದ ೬೩

ಸಂಶೋಧನಾರ್ಥಿ, ಬೆಂಗಳೂರು ವಿಶ್ವವಿದ್ಯಾಲಯ, ಮೊ: ೯೭೨೮ ೫೬೧೧೯

# ವಚನಗಳಲ್ಲಿ 'ಕಾಯಕ ಪರಿಭಾಷೆ'

**ಶ್ರೀ ಶಿವಕುಮಾರ ಎಸ್. ಬಳಿಗಾರ**

***ಪೀಠಿಕೆ:***

ವಚನಗಳು ಕನ್ನಡಿಗರ ಸ್ವಯಾರ್ಜಿತ ಸೊತ್ತು. ವಚನ ಸಾಹಿತ್ಯ ತನ್ನ ವಿಶಿಷ್ಟ ಗುಣಲಕ್ಷಣಗಳಿಂದ ಕನ್ನಡ ಸಾಹಿತ್ಯ ದೇವಿಯ ಸಿರಿಮುಡಿಯ ರತ್ನವಾಗಿದೆ. ವಚನಗಳು ಸಾಹಿತ್ಯ ಪ್ರಕಾರವೆಂಬುದು ಇಂದು ಎಲ್ಲರೂ ನಿಸ್ಸಂದೇಹವಾಗಿ ಒಪ್ಪಿದ್ದಾರೆ. ವಚನ ಸಾಹಿತ್ಯ ಕನ್ನಡ ಭಾಷೆಯನ್ನು ಹಲವು ರೀತಿಯಲ್ಲಿ ಶ್ರೀಮಂತಗೊಳಿಸಿದೆ. ವಚನಗಳ ವಿಶೇಷತೆಯನ್ನು ಈ ಕೆಳಗಿನಂತೆ ಭಾವಗೀತಗೊಳಿಸಬಹುದು.

**ವಚನವೆಂದರೆ ನುಡಿದಂತೆ ನಡೆವ ನಡೆದಂತೆ ನುಡಿವ ಪ್ರಮಾಣ ದೇವರಲ್ಲಿ,**
**ವಚನವೆಂದರೆ ಗದ್ಯಪದ್ಯ ಸಮ್ಮಿಲನದ ಗೀತಗೇಯತೆ ಸಾಹಿತ್ಯದಲ್ಲಿ,**
**ವಚನವೆಂದರೆ ಒಡಲಬಂಡಿಗೆ ಶರಣರ ನುಡಿಗಡಣದ ಕಡಗೀಲು ಬಾಳಪಥದಲ್ಲಿ,**
**ವಚನವೆಂದರೆ ಮರ್ತ್ಯರ ಮನದ ಮೈಲಿಗೆ ಕಳೆಯಲು ಬೆಳಗಿ ಕೊಟ್ಟ**
**ಗೀತಮಾತೆಂಬ ಜ್ಯೋತಿ ಶರಣರಲ್ಲಿ,**
**ವಚನವೆಂದರೆ ಕಾಯಕ ಜೀವಿಗಳ ಸಿದ್ಧೌಷಧ ಭವರೋಗ ನಿವಾರಿಸುವಲ್ಲಿ,**
**ವಚನವೆಂದರೆ ದೇವಲೋಕಕ್ಕೆ ನಿರ್ಮಿಸಿದ ಶಬ್ದಸೋಪಾನ ಪುರಾತರಲ್ಲಿ,**
**ವಚನವೆಂದರೆ ಅಂಗಲಿಂಗಸಮರಸದ ಶಬ್ದ ಮುಗ್ಧ ನಿಲುವು ಲಿಂಗಾನುಭವಿಯಲ್ಲಿ,**
**ವಚನವೆಂದರೆ ಲಿಂಗ ಮೆಚ್ಚುವ ಮನದೆರೆದ ಮಾತು, ನುಡಿ ಮುತ್ತಿನ ಹಾರ ಬಸವೇಶ್ವರರಲ್ಲಿ,**
**ವಚನವೆಂದರೆ ಬಯಲ ಗಳಿಕೆಯ ಬೆಳಗು, ಮಾತು ಜ್ಯೋತಿರ್ಲಿಂಗ ಅಲ್ಲಮಪ್ರಭುವಿನಲ್ಲಿ,**
**ವಚನವೆಂದರೆ ಕನ್ನಡದಿ ಕನ್ನಡಿಸಿದ ಕನ್ನಡಿಗರ ಹೃದಯವಂತಿಕೆಯ ಕನ್ನಡಿ ಭಾಷಾಭಿಮಾನಿಯಲ್ಲಿ.**

ತಮ್ಮ ಹೃದಯದ ಹದುಳ ಭಾವದಿಂದ, ಸಮಷ್ಟಿಹಿತದ ಸಾಮಾಜಿಕ ಪ್ರಜ್ಞೆಯಿಂದ ಜಾತಿ, ಲಿಂಗ, ವರ್ಗಭೇಧವಿಲ್ಲದೆ ಎಲ್ಲರೂ ಲಿಂಗ ಪಾತಳಿಯಲ್ಲಿ ಪಡೆದ ಅನುಭಾವದ ಅಂತರಂಗದ ಸಹಜ ಅಭಿವ್ಯಕ್ತಿಯಾದ ವಚನ ಸಾಹಿತ್ಯ ಜಗತ್ತಿನಲ್ಲೇ ವಿಶಿಷ್ಟ ಪ್ರಕಾರವಾದ ಸಾಹಿತ್ಯವಾಗಿದೆ.

***ಭಾಷಾಶಾಸ್ತ್ರದ ವಿವರ:***

ಕರ್ನಾಟಕದ ಶರಣಧರ್ಮದ ಹಿರಿದಾದ ಆದರ್ಶಗಳಲ್ಲಿ ವೃತ್ತಿಗೌರವಕ್ಕೆ ತುಂಬು ಮಹತ್ವವಿದೆ. ಶಿವಶರಣರು ಕಾಯಕಸಿದ್ಧಾಂತ ಮತ್ತು ದಾಸೋಹ ತತ್ವಗಳನ್ನು ಇಲ್ಲಿ ಪ್ರತಿಪಾದಿಸಿದ್ದಾರೆ. ಅವರು ತಮ್ಮ ದೈನಂದಿನ ಬದುಕಿನ ನಿರ್ವಹಣೆಗಾಗಿ ಕಾಯಕವನ್ನು ಕಡ್ಡಾಯವಾಗಿ ಅನುಸರಿಸಿಕೊಂಡು ಬಂದಿದ್ದಾರೆ. ತಮ್ಮ ತಮ್ಮ ವೃತ್ತಿಕಾಯಕ ಸನ್ನಿವೇಶಗಳಲ್ಲಿ ಆ ಕ್ರಿಯೆಯೊಂದಿಗಿನ ಅಲ್ಲಿ ಪಡೆದ ಅನುಭವಗಳನ್ನು ಆ ಸಂದರ್ಭದಲ್ಲೇ ಅವರು ಅನುಸರಿಸಿದ ವೃತ್ತಿ ಸೂಚಕ ಪದಗಳಲ್ಲಿ ವಚನಗಳನ್ನು ಪ್ರರೂಪದ ಮಾದರಿಯಲ್ಲಿ ದಾಖಲಿಸಿದ್ದಾರೆ.

ವೃತ್ತಿಗಳು ಸಮಾಜದ ಸರ್ವಾಂಗೀಣ ವಿಕಾಸಕ್ಕೆ ತಳಹದಿಯಾಗಿವೆ. ಇದರಿಂದ ಸಹಕಾರ,



ಸಂಘಟನೆ, ಸ್ವಾವಲಂಬನೆ ಹಾಗೂ ಆರ್ಥಿಕ ಸಮೃದ್ಧಿ ಉಂಟಾಗುತ್ತದೆ. ದಾರಿದ್ರ್ಯ, ಆಲಸ್ಯ ಪರಾವಲಂಬನೆಯಿಂದಾಗಿಯೇ ಗುಲಾಮ ಸ್ಥಿತಿಗಿಳಿಯುತ್ತವೆ. ವಸಾಹತುಶಾಹೀ ಬೆಳೆದು ಬಂದುದೇ ಹೀಗೆ.

ಶಿವಶರಣರು ತಮ್ಮ ವೃತ್ತಿಗಳನ್ನೇ ತಮ್ಮ ಆಧ್ಯಾತ್ಮ ಬಾಳಿನ ಪ್ರವೃತ್ತಿಯನ್ನಾಗಿ ಮಾರ್ಪಡಿಸಿಕೊಂಡಿದ್ದಾರೆ. ಲೌಕಿಕವಾಗಿ ಯಾವುದೇ ವೃತ್ತಿಗಳು ಸಮಾನ ಮತ್ತು ಸಂಚಲನಶೀಲವುಳ್ಳವುಗಳಾಗಿವೆ ಎಂದು ಸಾರಿದ್ದಾರೆ. ಶರಣರ ಒಂದೊಂದು ಕಾಯಕದಲ್ಲೂ ಅವರ ಪ್ರರೂಪಗಳು ಅರ್ಥಾತ್ ವೃತ್ತೀಯ ಉಪಭಾಷೆಗಳು ನಿರ್ವಹಣೆಗೊಂಡುದ್ದನ್ನು ನಾವು ನಿಚ್ಚಳವಾಗಿ ಕಾಣಬಹುದು.

ಹೊಡೆಹೊಡೆಯಾಗಿ ಬೆಳೆದ ಹುಲ್ಲನ್ನು ಕೊಯ್ದು ಹುಲ್ಲು ಹೊರೆಯನ್ನು ಹೊತ್ತು ಮಾರುವ ವೃತ್ತಿಯಲ್ಲಿದ ಹೊಡೆಹುಲ್ಲು ಬಂಕಣ್ಣನ ಪ್ರರೂಪಣೆ ಇಲ್ಲಿದೆ.

**ನೆಲ್ಲು ನೆಲದಲ್ಲಿಯೇ ಅಳಿದು ಹುಲ್ಲಿನ ಒಡಲಲ್ಲೇ ಜನಿಸಿ**
**ಆ ಹುಲ್ಲು ತನ್ನೊಳಗಿರಿಸಿದ ಭೇಧವನೋಡಾ;**
**ತನ್ನೊಡಲು ಅಳಿದಲ್ಲಿ ನೆಲ್ಲು ಅಲ್ಲ ಹುಲ್ಲೂ ಅಲ್ಲ,**
**ಆ ಹೊಡೆಯಲ್ಲಿ ಅಡಗಿತ್ತೆಂದರಿಯೆ, ಕುಂಭೇಶ್ವರಲಿಂಗದಲ್ಲಿ**
**ಜಗನ್ನಾಥ ಸಾಕ್ಷಿಯಾಗಿ". –ಹೊಡೆಹುಲ್ಲುಬಂಕಣ್ಣ**

'ನೆಲ್ಲು ಇಲ್ಲವೆ ಕಳವೆ ಧಾನ್ಯ ಬೆಳೆಯಲು ನೆಲವೇ ಆಧಾರ. ನೆಲದಿಂದ ನೆಲ್ಲು ಜನಿಸಬೇಕಾದರೆ ಅದು ಮೊದಲು ಮಣ್ಣಿನ ಪೋಷಕ ದ್ರವ್ಯದೊಂದಿಗೆ ಹುಲ್ಲಾಗಿ ಉದಿಸುತ್ತದೆ, ಹೊಡೆ ಹಾಕುತ್ತದೆ. ಆ ಹೊಡೆಯಲ್ಲೇ ಹಾಲುಗಳು ತುಂಬಿಕೊಳ್ಳುತ್ತದೆ. ಮತ್ತೆ ಅದೇ ಬೀಜವನ್ನು ನಾಟಿ ಮಾಡಿದಾಗ ಪುನಃ ಅದೇ ಹುಲ್ಲಾಗಿ ಹುಟ್ಟಿ ಬೆಳೆಯುತ್ತದೆ. ಇದು ಭತ್ತದ ಹುಲ್ಲಿನ ಜೀವನಚಕ್ರ ಬಂಕಣ್ಣ ತನ್ನ ವೃತ್ತಿಯಲ್ಲಿನ ಈ ಅನುಭವವನ್ನು ಎಷ್ಟು ಸೂಕ್ಷ್ಮವಾಗಿ ನಿರೂಪಿಸಿರುವನೆಂಬುದು ಇದರಿಂದ ಹೊಳೆಯುತ್ತದೆ. ಇದರಂತೆಯೇ ಮನುಷ್ಯನ ಒಡಲು–ಪ್ರಾಣ–ಆತ್ಮಗಳ ಅವಿನಾಭಾವ ಸಂಬಂಧವನ್ನು ಅದರ ಅಗೋಚರ ಮತ್ತು ದೃಗ್ಗೋಚರವೆರಡರ ಸ್ಥಿತಿಯನ್ನು ಅವನು ಬಣ್ಣಿಸುತ್ತಾನೆ. ಇಲ್ಲಿ ಕೇವಲ ಪರಿಭಾಷೆಯನ್ನಷ್ಟೇ ಹವ್ಯಾಸವಾಗಿಸದೆ ಒಂದು ಜೀವನ ವೃತ್ತಿಯ ಅನುಭವ ಗಟ್ಟಿಗೊಂಡು ಅದನ್ನೇ ಭಾಷೆಯಲ್ಲಿ ನಿರ್ವಾಹಗೊಳಿಸಲಾಗಿದೆ.

ಸಾಮಾಜಿಕ ಭಾಷಾವಿಜ್ಞಾನದಲ್ಲಿ ಒಂದು ವೃತ್ತಿರೂಪವಾದ ಭಾಷೆ ಅಭಿವ್ಯಕ್ತಗೊಳ್ಳುವ ವಿಧಗಳ ಮೂರು ತೆರನಾಗಿವೆ.

**ಪ್ರರೂಪ ಭಾಷೆಯ ಆವರಣ:** ಶಿವಶರಣರು ಅನುಸರಿಸಿದ ಒಂದೊಂದು ವೃತ್ತಿ ಕ್ಷೇತ್ರಗಳೇ ಇಲ್ಲಿ ಆವರಣವಾಗುತ್ತವೆ.

**ಪ್ರರೂಪ ಭಾಷಾ ಮಾಧ್ಯಮ :** ವೃತ್ತಿ ಕ್ಷೇತ್ರದ ಅನುಭವದ ಅಭಿವ್ಯಕ್ತಿಗಾಗಿ ಅವರು ಮೌಖಿಕ ಹಾಗೂ ಗ್ರಾಂಥಿಕ ಅಲ್ಲದೇ ಪ್ರದರ್ಶನ ಕಲಾ ಮಾಧ್ಯಮಗಳನ್ನು ಬಳಸಿಕೊಳ್ಳುತ್ತಾರೆ.

**ಪ್ರರೂಪಭಾಷಾ ಶೈಲಿ:** ಪ್ರರೂಪಭಾಷಾ ಶೈಲಿಯಲ್ಲಿ ಕಾಣುವ ವೈಲಕ್ಷಣಗಳೆಂದರೆ ಆಯಾ ವೃತ್ತಿಗೆ ಅನುಗುಣವಾದ ವೃತ್ತಿ ಪದಗಳ ಬಳಕೆ ಅಲ್ಲದೇ ವೃತ್ತಿ ಸಂಬಂಧಿ ಪರಿಭಾಷೆಗಳನ್ನು ವಿವಿಧ ಲೌಕಿಕ ಆಧ್ಯಾತ್ಮಿಕ ಚಿಂತನೆಗಳಲ್ಲಿ ಅಲ್ಲಿನ ಪರಿಸರದ ಅರ್ಥವನ್ನು ವಿಸ್ತರಿಸಿಕೊಳ್ಳುವ ವಿಧಾನಗಳು.

**ವಿಷಯ ವಿಸ್ತಾರ:** ವಚನ ಸಾಹಿತ್ಯ ವಿವಿಧ ಕಾಯಕಜೀವಿಗಳ ಜೀವನಾನುಭವ ಶಿವಾನುಭವದ ಅಭಿವ್ಯಕ್ತಿಯಾಗಿ ತಮ್ಮ ಕಾಯಕವನ್ನೇ ಆಧ್ಯಾತ್ಮ ಸಾಧನಾಪಥವಾಗಿಸಿ ಕಾಯಕ ಪರಿಭಾಷೆಯಲ್ಲಿ ತಮ್ಮ ಕಾಯಕದ ವಿವರಗಳನ್ನು ಆಧ್ಯಾತ್ಮ ಸಾಧನೆಯ ವಿಚಾರಗಳನ್ನು ಬಹಳ ಸುಂದರವಾಗಿ ಪೋಷಿಸಿ

ಶರಣರು ಕನ್ನಡ ಸಾಹಿತ್ಯಕ್ಕೆ ಒಂದು ಹೊಸತನವನ್ನು ಒದಗಿಸಿದ್ದಾರೆ. ಭಾಷೆ ಹುಟ್ಟುವುದು ಉತ್ಪಾದನೆಯಿಂದ ಬೆಳೆಯುವುದು ವ್ಯವಹಾರಿಕ ಸಂವಹನದಿಂದ ಸದೃಢವಾಗುವುದು ಸಾಂಸ್ಕೃತಿಕ ಮೌಲ್ಯಗಳಿಂದ. "ಶರಣರ ದೇಹವು ವೃತ್ತಿಯಲ್ಲಿ ನಿರತವಾಗಿದ್ದರೆ ಅಂತರಂಗವು ಅದು ಸಂಕೇತಿಸುವ ಆಧ್ಯಾತ್ಮ ಸಾಧನೆಯಲ್ಲಿ ತೊಡಗಿರುವುದೇ ಕಾಯಕದ ಆದರ್ಶ ಸ್ಥಿತಿ". ಇಂತಹ ಕಾಯಕದ ಪರಿಭಾಷೆಯ ಸೊಗಡನ್ನು, ಶರಣರ ಹದುಳಭಾವದ ಅಂತರಂಗ ದರ್ಶನವನ್ನು ಕೆಲವು ಶರಣರ ವಚನಗಳ ಮೂಲಕ ಕಂಡುಕೊಳ್ಳುವ ಕಿರು ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

**"ತಡಿನೆಲೆಯಿಲ್ಲದ ಮಹಾನದಿಯಲ್ಲಿ**
**ಒಡಲಿಲ್ಲದಂಬಿಗ ಬಂದೈದಾನೆ**
**ಹಿಡಿವ ಬಿಡುವ ಮನವ ಬೆಲೆಗೊಟ್ಟೊಡೆ**
**ಗಡಣದವಿಲ್ಲದೆ ಹಾಯಿಸುವೆ ಹೊಳೆಯ**
**ನುಡಿಯಿಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವನೆಂದಾತನಂಬಿಗರ ಚೌಡಯ್ಯ".**
**"ಅಂಬಿಗ ಅಂಬಿಗ ಎಂದು ಕುಂದು ನುಡಿಯದಿರು**
**ನಂಬಿದರೆ ಒಂದೇ ಹುಟ್ಟಲಿ**
**ಕಡೆಯ ಹಾಯಿಸುವ ನಂಬಿಗರ ಚೌಡಯ್ಯ". –ಅಂಬಿಗರ ಚೌಡಯ್ಯ**

ಶರಣ ಅಂಬಿಗರ ಚೌಡಯ್ಯನವರು ದೋಣಿ ನಡೆಸುವ ತಮ್ಮ ಕಾಯಕದ ಪರಿಭಾಷೆಯಲ್ಲಿ ಈ ಭವಸಂಸಾರ ದಾಟಿಸುವ ಆತ್ಮವಿಶ್ವಾಸ ತುಂಬುತ್ತಿದ್ದಾರೆ. ಅದಕ್ಕೆ ನಾವು ಕೊಡಬೇಕಾದ ಬೆಲೆ ಈ ಚಂಚಲ ಮನವನ್ನು ಚಿತ್ತ ವೃತ್ತಿ ನಿರೋಧಗೊಳಿಸಿ ಶ್ರದ್ಧೆಯಿಂದ ಭಕ್ತಿ ಮಾಡುವುದು ಹಾಗೆ ಮಾಡಿದಾಗ ಒಂದೇ ಹುಟ್ಟಲಿ ಈ ಭವ ಸಂಸಾರ ಶರಧಿಯನ್ನು ಒಂದೇ ಹುಟ್ಟಲಿ ಗಡಣ ಹಾಯಿಸಿ ನಿಸ್ಸೀಮ ಸುಖದ ನಿಜನಿವಾಸದಲ್ಲಿರಿಸುವವನು. ಭಾರತದ ಆಧ್ಯಾತ್ಮಿಕ ಅನುಭಾವದಭಿವ್ಯಕ್ತಿಯಲ್ಲಿ ಅಂಬಿಗ, ಸಂಸಾರ ಶರಧಿ, ದೋಣಿ ಸಾಂಕೇತಿಕವಾಗಿ ಶ್ಲೇಷಾರ್ಥದಲ್ಲಿ ಬಳಕೆಯಾಗಿ ವಿಶೇಷ ಮೆರುಗು ಭಾಷೆಗೆ ದೊರಕಿದೆ. ಶರಣ ಅಂಬಿಗರ ಚೌಡಯ್ಯನವರು ಅಂದು ಜಾತಿ ವೃತ್ತಿ ಮೂಲ ಭೇಧದಿಂದ ಬೇಸತ್ತು 'ಅಂಬಿಗ'ನೆಂದು ಕೀಳು ಜಾತಿಯವನೆಂದು ಜರಿಯದಿರಿ 'ನಂಬಿ'ದರೆ ಒಂದೇ ಹುಟ್ಟಲಿ ನಿಮ್ಮನ್ನು ಆಧ್ಯಾತ್ಮಿಕ ಅರಿವಿನಿಂದ ಭವಸಂಸಾರ ಸಾಗರದಿಂದ ಕಡೆಹಾಯಿಸುವೆನೆಂದಿದ್ದಾರೆ. ತಮ್ಮ ಹೆಸರನ್ನೇ ಅಂಕಿತವಾಗಿಸಿಕೊಂಡು ಶರಣ ತತ್ವದ ಆತ್ಮವಿಶ್ವಾಸದ, ತನ್ನಲ್ಲೇ ಆ ಪರಾತ್ಮಕರ ಪರವಸ್ತುವಿದ್ದಾನೆಂಬ ಸತ್ಯವನ್ನು ಸಾಕ್ಷೀಕರಿಸಿದ್ದಾರೆ.

**ಸಂಸಾರವೆಂಬ ಸಾಗರದ ಮಧ್ಯದೊಳಗೆ**
**ಬೆಳೆದ ಹೊಡಕೆಯ ಹುಲ್ಲು ಕೊಯ್ದು**
**ಮತ್ತಮಾ ಕಣ್ಣ ತೆಗೆದು, ಕಣ್ಣೆಯ ಮಾಡಿ**
**ಇಹ ಪರವೆಂಬ ಉಭಯದ ಗಂಟನಿಕ್ಕಿ**
**ತುದಿಯಲ್ಲಿ ಮಾಟಕೂಟವೆಂಬ ಮನದ ಕುಣಿಕೆಯಲ್ಲಿ ಕಾಯಕವಾಯಿತ್ತು**
**ಇದು ಕಾರಣ ಚಂದೇಶ್ವರವೆಂಬ ಭಾವವೆನಗಿಲ್ಲ". –ನುಲಿಯ ಚಂದಯ್ಯ**

ಸಂಸಾರ ಸಾಗರದಲ್ಲಿ ಅಹಂಕಾರ ಮಮಕಾರ ಆಸೆಯ ಸಂಕೇತದ ಹುಲ್ಲು ಕೊಯ್ದು, ಅಹಂಕಾರದ ಗಣ್ಣು(ಗಂಟು) ತೆಗೆದು ಹಾಕಿ ಕಣ್ಣಿಯ ಹೊಸೆಯಬೇಕು ಇದರಿಂದ ಮನವನ್ನು ಕಟ್ಟಬೇಕು. ಇಹಪರವೆಂಬ ಎರಡು ಗಂಟು ಹಾಕಿ ಮಾಟಕೂಟವೆಂಬ ಕುಣಿಕೆಯಿಂದ ಸಾಧನೆ ಮಾಡಿದಾಗ ಕಾಯಕಸಿದ್ಧಿಯಾಗಿ ಲಿಂಗಾಂಗ ಸಾಮರಸ್ಯ ಭಾವದಲ್ಲಿ ಲೀನವಾದ ಶರಣನ ಚಿತ್ರಣ ಇಲ್ಲಿದೆ. ಹಗ್ಗ ಹೊಸೆಯುವ 'ಕಾಯಕದ' ವಿವರಗಳು ಮಾನವನ ಆಧ್ಯಾತ್ಮ ಸಾಧನೆಯ ಪ್ರಕ್ರಿಯೆಗೆ ಹೊಂದಿಕೊಂಡು 'ಕಾಯ', ಕಾಯಕಸಿದ್ಧಿ



ಪಡೆಯುವುದರ ವಿವರಗಳನ್ನು ಸಹಜವಾಗಿ, ಸರಳಗನ್ನಡದಲ್ಲಿ ನೀಡಿದ್ದಾರೆ.

**ತನುವೆಂಬ ಮೊರದಲ್ಲಿ ಮಾಯಾಗುಣವೆಂಬ ಮಾರಿಯ ಹಿಡಿದು**
**ರಾಜಸ ತಾಮಸವೆಂಬ ಬಾಳಬಟ್ಟಲು ಕೈಯಲ್ಲಿ**
**ಪ್ರಳಯ ಸಂಹಾರವೆಂಬ ಬಳೆಯ ಕೈಯಲಿಕ್ಕಿ**
**ಅಂಗದ ಮನೆಯ ಬಾಗಿಲಲ್ಲಿ ಕೊಂಡು ಬಂದಿದ್ದೇನೆ**
**ಬಲ್ಲವರಿಕ್ಕಿ, ಅರಿಯದವರೆಲ್ಲರೂ ಸುಮ್ಮನಿರಿ**
**ಢಕ್ಕೆಯ ಉಲುಹಡಗುವುದಕ್ಕೆ ಮುನ್ನವೆ ನಿಶ್ಚಯಿಸಿ**
**ನಿಜತತ್ವವನರಿ, ಕಲಾಂತಕ ಭೀಮೇಶ್ವರ ಲಿಂಗವ ನರಿಯಬಲ್ಲಡೆ". – ಢಕ್ಕೆಯ ಬೊಮ್ಮಣ್ಣ**

ಶರೀರವೆಂಬುದೊಂದು ಮರ, ಮಾಯಾ ಗುಣವೇ ಮಾರಿ, ಅವಳ ಕೈಯಲ್ಲಿ ರಾಜಸ ತಾಮಸ ಗುಣದ ಬಟ್ಟಲು ಮತ್ತು ಅಳಿವು ಉಳಿವು ಎಂಬ ಎರಡು ಬಳೆಗಳಿವೆ. ಈ ದೇಹದ ಬಾಗಿಲಲ್ಲಿ ಮಾರಿ ನಿಂತಿದ್ದಾಳೆ. ಅವಳ ಸ್ವಭಾವ ಬಲ್ಲವರು ಏನಾದರೂ ನೀಡಿ ಮಾರಿಯನ್ನು ತೃಪ್ತಿಗೊಳಿಸಿರಿ ಇಲ್ಲದವರು ಸುಮ್ಮನಿರಿ. ನಿಮ್ಮ ಆಯುಷ್ಯ ರಾಶಿ ತೀರುವ ಮುನ್ನ ನಿಜವನರಿತು ಆಧ್ಯಾತ್ಮ ಸಾಧನೆ ಮಾಡಬೇಕು. ಅಜ್ಞಾನ ರೂಪಿ ಮಾರಿಯನ್ನು ಶಾಂತಗೊಳಿಸಲು ಜ್ಞಾನವೇ ಸಾಧನ, ಆ ಅರಿವಿನಿಂದ ಆಧ್ಯಾತ್ಮ ಸಾಧನೆ ಮಾಡಬೇಕು. ತನ್ನ ಕಾಯಕ ಪರಿಭಾಷೆಯಲ್ಲಿ ಆಧ್ಯಾತ್ಮ ಸಾಧನೆಗೆ ಅವಶ್ಯಕವಾದ ನಿಲುವನ್ನು ಅಭಿವ್ಯಕ್ತಿಸಿ ಎಲ್ಲರಿಗೂ ಸುಲಭ ಗ್ರಾಹ್ಯಗೊಳಿಸಿ ರುವುದು ಕಂಡುಬರುತ್ತದೆ.

**ಉಂಕೆಯ ನಿಗುಚಿ ಸರಿಗೆಯ ಸಮಗೊಳಿಸಿ**
**ಸಮಗಾಲನಿಕ್ಕ ಅಣಿಯೇಳ ಮುಟ್ಟದೆ**
**ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು**
**ಈ ಸೀರೆಯ ನೇಯ್ದವ ನಾನೋ ನೀನೋ ರಾಮನಾಥ".– ಜೇಡರ ದಾಸಿಮಯ್ಯ**

ಶ್ರದ್ಧೆಯಿಂದ ಕಾಯಕನಿರತನಾದ ಶರಣ ತನ್ನ ಕಾಯದಲ್ಲಿರುವ ಪರಮ ಚೈತನ್ಯದೊಂದಿಗೆ ನಡೆಸುವ ಸ್ವಗತ ಸಂವಾದ ಹಲವು ವಚನಗಳಲ್ಲಿದೆ. ನೇಯ್ಗೆ ಕಾಯಕದ ಜೇಡರ ದಾಸಿಮಯ್ಯನವರು ತಮ್ಮ ಬಟ್ಟೆ ನೇಯುವ ಕಾಯಕದಲ್ಲಿ ಆಧ್ಯಾತ್ಮಭಾವ ಸಮರಸದಿಂದ ಕಾಯಕ ಸಿದ್ಧಿ ಆ ರಾಮನಾಥನಿಂದಾಯಿತು ಎಂದರಿತು ತನ್ನಂತರಂಗದ ಚೈತನ್ಯಕ್ಕೇ ಪ್ರಶ್ನಿಸುವ ಪರಿ ಅನನ್ಯವಾಗಿದೆ. ಬಹಿರಂಗದ ನೇಯ್ಗೆ ಕಾಯಕ ಅಂತರಂಗದ ಆಧ್ಯಾತ್ಮ ಸಾಧನೆ ಏಕಕಾಲಕ್ಕೆ ನಡೆಯುವ ವಿವರ ಇಲ್ಲಿದೆ. "ನೇಯುವ ಮುನ್ನ ನೂಲು ಹಸನಾಗಬೇಕು ಇಲ್ಲಿ ಮನಹಸನಾಗುವುದು. ಮಗ್ಗದಲ್ಲಿ ಎಳೆ ತೊಡಕಾದರೆ ಬಿಡಿಸಬೇಕು, ಮನಸ್ಸಿನ ಎಳೆ ಹೊಸೆತದ ದೃಢತೆಯ ಪ್ರಯತ್ನ ಮಗ್ಗದ ಕುಣಿಯಲ್ಲಿ ಎರಡೂ ಕಾಲನಿಟ್ಟು ನಡೆಸಬೇಕು, ಸಪ್ತ ವ್ಯಸನ ಮೆಟ್ಟಿ ಬೇಕು ಬೇಡ ಎನ್ನದ ಮನದ ಸಮತ್ವ, ಎಳೆ ಎಳೆಯನ್ನು ಹೊಯ್‌ಕೆಯ್ಯಾಗಿ ಜೋಡಿಸುವ ಲಾಳಿಯ ಮುಳ್ಳು ಕಂಡಿಕೆಯೊಂದಿಗೆ ಆಚೀಚೆ ಆಡುತ್ತದೆ. ಘನವನ್ನು ನುಂಗಿ ಮನ ಆಡುವುದು. ನೇಯ್ದ ಸೀರೆ ಮಹಾಲಿಂಗದಲ್ಲಿ ಬೆರೆದ ಅಂಗನ ಸುಖಾನುಭವ ಒಂದು ಒಡಲ ಆಹಾರ ಇನ್ನೊಂದು ಆತ್ಮದ ಆಹಾರ. ಈ ಸೀರೆಯ ನೇಯ್ದವ ನಿನ್ನೊಳು ಕುಳಿತ ನಾನು! ನನ್ನಲ್ಲಿರುವ ನೀನಲ್ಲವೇ?" ಎಂಬ ಶ್ರೀ ಡಾ. ಬಸವಲಿಂಗ ಸೊಪ್ಪಿಮಠ ಅವರು ವ್ಯಾಖ್ಯಾನ ಬಹಳ ಸುಂದರವಾಗಿ ವಚನದ ಮಾರ್ಮಿಕತೆಯನ್ನು ಸ್ಪಷ್ಟೀಕರಿಸಿದೆ.

**ನಾನಾ ವರ್ಣದ ಗೋವುಗಳೆಲ್ಲವೂ ಕೂಡಿ ಒಂದೇ ಹೊಲದಲ್ಲಿ ಮೇದು**
**ಆರು ಕೆರೆಯ ನೀರು ಕುಡಿದು ಒಂದೇ ದಾರಿಯಲ್ಲಿ ಬಂದು**
**ಮೂರು ಕೊಟ್ಟಣೆಯ ಗೊತ್ತಿಂಗೊಳಗಾದವು, ಬಿಟ್ಟು ಕರೆಯಲಾಗಿ**

ಗೋವಿಂಗೆ ವರ್ಣಹಲವು, ಹಾಲಿಂಗೆ ಏಕವರ್ಣ
ಹಾಲು ತಂದು ಭಾಜನದಲ್ಲಿ ನೀಡಿ ಕಾಸುವಲ್ಲಿ
ಚಟ್ಟ ಹತ್ತದೆ ಹಸುಕು ನಾರದೆ
ಕೌರು ಏಳದೆ, ನೀರರಸ ತಪ್ಪಿ ಮಧುರ ರಸತುಂಬಿ
ಕಾಸಿ ಉಣಬಲ್ಲತೆ ಆತನೆ ಭೋಗಿ
ಆತ ನಿರತಿಶಯ ಅನುಭಾವ ಶುದ್ಧಾತ್ಮನು
ಕಾಲಕರ್ಮವಿರಹಿತ ತ್ರಿಪುರಾಂತಕಲಿಂಗತಾನೆ". – ಕೀಲಾರದ ಭೀಮಣ್ಣ

ಕಲ್ಯಾಣದಲ್ಲಿ ವ್ಯವಸಾಯ ಮಾಡಿಕೊಂಡು, ದನಕಾಯುವ ಕೆಲಸವನ್ನು ಮಾಡುತ್ತಿದ್ದವ ಕೀಲಾರದ ಭೀಮಣ್ಣ. ತನ್ನ ಲೌಕಿಕ ಕಾಯಕದಿಂದ ಪಡೆದ ಜೀವನಾನುಭವವನ್ನು ಆಧ್ಯಾತ್ಮ ಸಾಧನೆಗೆ ಬೇಕಾದ ರೀತಿಗೆ ಹೋಲಿಸಿ ವಿಶೇಷ ಅರ್ಥಬರುವಂತೆ ವಚನ ಮೂಡಿಬಂದಿದೆ. ದನಕಾಯುವ ಕೆಲಸದ ವಿವರ ಇಲ್ಲಿಯೂ ಇದೆ ಆದರೆ ದೃಷ್ಟಿಕೋನ ವಿಶಾಲವಾಗಿದೆ ಮತ್ತು ಆಳವಾಗಿದೆ.

ಗೋವುಗಳಿಗೆ ವರ್ಣ ಹಲವು ಹಾಲಿಂಗೆ ಏಕ ವರ್ಣ. ಬೇರೆ ಬೇರೆ ವರ್ಣಹೊಂದಿದ್ದರೂ ಕೂಡ ಗೋವುಗಳು ಕೊಡುವ ಹಾಲಿನ ಬಣ್ಣ ಬಿಳಿಯದಾಗಿತ್ತದೆ. ಜಗದ ಜೀವಿಗಳಲ್ಲಿ ಮೇಲ್ನೋಟಕ್ಕೆ ನಮಗೆ ಭಿನ್ನತೆ ಕಾಣಬಹುದು. ಆದರೆ ಎಲ್ಲರಲ್ಲಿರುವ ಆತ್ಮ ಚೈತನ್ಯ ಒಂದೇ. ಸತ್ವಸತ್ಯ ಎಲ್ಲರಲ್ಲೂ ಒಂದೇ ಇರುತ್ತದೆ. ಅರಿವಿನಿಂದ ಸೂಕ್ತ ಸಾಧನೆ ಮಾಡಿ ಆಧ್ಯಾತ್ಮ ಸಿದ್ಧಿ ಪಡೆಯಬಹುದು.

ಆರು ಕೆರೆಯ ನೀರು ಕುಡಿದು ಎಂದರೆ ಅರಿಷಡ್ವರ್ಗಗಳಿಂದ ಮನಸ್ಸು ಚಂಚಲವಾಗಿದೆ. ಪ್ರತಿಯೊಬ್ಬರಲ್ಲಿ ಸತ್ವ ರಜ ತಮೋಗುಣಗಳಿವೆ. ನಾನಾ ವರ್ಣದ ಈ ಸಂಸಾರದಲ್ಲಿ ಜೀವಿಗಳು ಈ ತ್ರಿಗುಣಗಳ ಗೊತ್ತಿಗೊಳಗಾಗಿವೆ. ಆದರೆ ಎಲ್ಲರಲ್ಲೂ ಗೋವು ಬಿಟ್ಟು ಕರೆದಾಗ ಏಕವರ್ಣ ಹಾಲು ಬರುವಂತೆ ಅರಿಷಡ್ವರ್ಗಗಳಿಂದ ಮುಕ್ತರಾಗಿ ಗುರುಕರುಣಿಸಿದ ಅರಿವೇ ಗುರುವಿನಿಂದರಿತು ಷಟ್‌ಸ್ಥಲ ಮಾರ್ಗದಿ ಸಾಧನೆ ಮಾಡುತ್ತಾ ಸ್ಥೂಲ, ಸೂಕ್ಷ್ಮ ಕಾರಣ ಶರೀರಗಳಲ್ಲಿ ಇಷ್ಟ, ಪ್ರಾಣ, ಭಾವಲಿಂಗ ಅನುಸಂಧಾನದ ತ್ರಿವಿಧ ಬೆಳಗಿನಿಂದ ನಿರ್ಗುಣ ನಿರಾಕಾರ ಪರಮಾತ್ಮನ ಇರವು ಬೆಳಕಿಗೆ ಬರುತ್ತದೆ. ಗುರುಲಿಂಗಜಂಗಮ ದಾಸೋಹದಿಂದ ಪಡೆದ ಪ್ರಸಾದದಿಂದ ದೊರೆತ ಜ್ಞಾನಾಮೃತವನ್ನು ಸತತ ಸಾಧನೆಯಿಂದ ಅಹಂಭಾವ ಮುಸುಕದಂತೆ ಎಚ್ಚರವಹಿಸಿ ಲಿಂಗಭೋಗೋಪಭೋಗಿಯಾಗಿ ನಿರತಿಶಯ ಭಾವದಿಂದ ಶುದ್ಧಾತ್ಮನಾಗುತ್ತಾನೆ. ಆಗ ಕಾಸಲಿಲ್ಲದ ತುಪ್ಪ ವಾಸನೆಯಿಲ್ಲದ ಪರಿಮಳ ಗುಹೇಶ್ವರನೆಂಬ ನಿರಾಳ ಸಿದ್ಧಿಯಾಗಿ ಕಾಲಕರ್ಮ ವಿರಹಿತ ತ್ರಿಪುರಾಂತಕಲಿಂಗ ತಾನೆ ಎಂಬ ನಿಲುವು ಸಾಧಕನದ್ದಾಗುತ್ತದೆ. ದೊರೆತ ಹಾಲನ್ನು ಕಾಯಿಸಿ ತುಪ್ಪ ಮಾಡುವ ಕ್ರಿಯೆಯನ್ನು ಬಹಳ ಮಾರ್ಮಿಕ ಉಪಮೆಯಾಗಿ ಬಳಸಿ ಶಿವಯೋಗ ಸಾಧನೆಯಲ್ಲಿ ಅವಧಾನ ಬಹಳ ಮುಖ್ಯ ಎಂಬ ಎಚ್ಚರಿಕೆ ಇಲ್ಲಿದೆ.

"ಬಾಹಿರವ ಕಳೆದು ಎಡೆನಾಣ್ಯವನುಳಿದು
ಹಲವು ನಾಣ್ಯವ ಕಳೆದು ಸಲುವ ನಾಣ್ಯವ ಹಿಡಿದು ನೋಡುವೆನಯ್ಯಾ
ತೂಕಗುಂದದ ನೋಟವ ನೋಡುವೆನಯ್ಯಾ
ಪರಮಜ್ಞಾನ ಕಂಗಳಿಂದ ಪರಬ್ರಹ್ಮನಿಂದ ನೋಟವ ನೋಡುವೆನಯ್ಯಾ
ಅದ್ವೈತದ ನಾಣ್ಯವ ಕಣ್ಮುಚ್ಚದ ನೋಟದಿಂ ನೋಡುವೆನಯ್ಯಾ
ಸೌರಾಷ್ಟ್ರ ಸೋಮೇಶ್ವರ ಲಿಂಗದ ನಿಜನಿಂದ ನೋಟವ
ನೋಡಿ ನೋಡಿ ನಿಬ್ಬೆರಗಾದೆನಯ್ಯಾ". – ಶರಣ ಆದಯ್ಯ

ಆದಯ್ಯ ಶ್ರೇಷ್ಠಿ ಸೌರಾಷ್ಟ್ರದವನು. ವ್ಯಾಪಾರ ನಿಮಿತ್ತ ಪುಲಿಗೆರೆಗೆ ಬಂದು ನೆಲೆನಿಂತ ಶಿವಭಕ್ತ.



ಇವನ ವೃತ್ತಿ ವ್ಯಾಪಾರ ಮಾಡುವುದು. ವ್ಯವಹಾರದಲ್ಲಿ ವಿನಿಮಯವೇ ಮುಖ್ಯಕಾರ್ಯ. ವಿನಿಮಯದ ಮಾಧ್ಯಮ ಹಣ. ತನ್ನ ಕಾಯಕದ ಮೂಲ ವಿನಿಮಯ ಮಾಧ್ಯಮ ನಾಣ್ಯವನ್ನು ಶ್ಲೇಷಾರ್ಥದಲ್ಲಿ ಬಳಸಿ ವಚನದ ಬಂಧಕ್ಕೆ ಹೊಸ ರೂಪ ನೀಡಲಾಗಿದೆ. ನಾಣ್ಯ ಪ್ರತಿ ಸಾಲಿನಲ್ಲಿ ಪುನರಾವರ್ತನೆಯಾಗುತ್ತಾ ಹೊಸ ಹೊಸ ಅರ್ಥ ನೀಡಿ ಅಂತಿಮವಾಗಿ 'ಶಿವಯೋಗ ಸಿದ್ಧಿ'ಯನ್ನೇ ಪ್ರತಿನಿಧಿಸಿ ನಮಗೆಲ್ಲ ಅಚ್ಚರಿವುಂಟುಮಾಡುತ್ತದೆ. 'ಇಷ್ಟಲಿಂಗ ಯೋಗ'ದಲ್ಲಿ ನೋಟವೇ ಕೂಟ ಕೂಟವೇ ಜೀವಾಳ. ನೋಟ, ನೋಡುವ ಪರಿ ಪ್ರತಿ ಸಾಲಿನಲ್ಲಿ ಮರುಕಳಿಸಿ ಕಣ್ಣರೆಪ್ಪೆ ಅಲುಗದ ಅನಿಮಿಷ ನೋಟ ಸೌರಾಷ್ಟ್ರ ಸೋಮೇಶ್ವರ ನಿಜನಿಂದ ದರ್ಶನ ನೀಡಿ ನಿಬ್ಬೆರಗಾದ ಸಾಧಕನ ಚಿತ್ರ ಕಣ್ಣು ಕಟ್ಟುವಂತಿದೆ.

ಮಾನವನ ಆಧ್ಯಾತ್ಮಿಕ ಸಾಧನೆಗೆ ಅಂತರಂಗ ಬಹಿರಂಗ ಶುದ್ಧಿ ಮುಖ್ಯವಾಗಿದೆ. ಬಹಿರಂಗದ ಕ್ರಿಯೆಗಳಲ್ಲಿ ಅಂಗ ಪಾತಳಿಯ ಮೇಲೆ ನಿಂತಿವೆ. ಅಲ್ಲಿ ಕ್ಷಣಿಕ ಸುಖಾಪೇಕ್ಷೆ ಮುಖ್ಯವಾಗಿ ಮಾನ ಮರವೆಗೊಳಗಾಗುತ್ತಾನೆ. ಈ ಸುಖಾಪೇಕ್ಷೆಯೆಡೆಗೆ ಸಲ್ಲುವ ಹಲವು ನಾಣ್ಯಗಳ ಆಮಿಷ ಮಾನವನ ಮುಂದಿದೆ. (ಆದರೆ 'ಅರಿವಿನ' ಬೆಳಕಲ್ಲಿ ಅಂತರಂಗ ದೃಷ್ಟಿ ಲಿಂಗ ಪಾತಳಿಯ ಮೇಲೆ ಹೊರಳಿ ನಿಜಸುಖದ ನೆಲೆ ತೋರಿಸುತ್ತಾನೆ. ಆಗ ಹಲವು ನಾಣ್ಯವ ಕಳೆದು ಸಲ್ಲುವ ನಾಣ್ಯವ ಹಿಡಿದು ಸಾಧಕ ಭಕ್ತಿ ಜ್ಞಾನ ಕ್ರಿಯೆಯಿಂದ ಸಾಧನೆಗಿಳಿಯುತ್ತಾನೆ. ಪರಬ್ರಹ್ಮನಿಂದ ನೋಟವ, ಅದ್ವೈತದ ನಾಣ್ಯವ, ಆಲಿನಿಂದರೆ ಸುಳಿದು ಸೂಸುವ ಗಾಳಿ ನಿಲ್ಲುವುದು ಎಂದರಿದು ಲಿಂಗಾಂಗ ಸಾಮರಸ್ಯದಿಂದ ಪಡೆದ ಪರಮಾನಂದ ನಿಬ್ಬೆರಗಿನ ಸ್ಥಿತಿ ಇಲ್ಲಿ ಬಹಳ ಸುಂದರವಾಗಿ ಅಭಿವ್ಯಕ್ತಿಗೊಂಡಿದೆ.

"ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ
ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ
ಅರಿಯದುದು ಹೋಗಲಿ, ಅರಿದು ಬೆರೆದೆನಾದಡೆ
ಕಾದ ಕತ್ತಿಯಲಿ ಕಿವಿಯ ಕೊಯ್ವರಯ್ಯಾ
ಒಲ್ಲೆ ಬಲ್ಲೆನಾಗಿ, ನಿಮ್ಮಾಣೆ ನಿರ್ಲಜ್ಜೇಶ್ವರಾ". – ಕೊಟ್ಟಣದ ಸೋಮವ್ವೆ

"ಒತ್ತೆಯ ಹಿಡಿದು ಮತ್ತೊತ್ತೆಯ ಹಿಡಿಯೆ
ಹಿಡಿದಡೆ ಬತ್ತಲೆ ನಿಲಿಸಿ ಕೊಲುವರಯ್ಯಾ
ವ್ರತಹೀನನರಿದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ, ಕಿವಿ, ಮೂಗ ಕೊಯ್ವರಯ್ಯಾ
ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ". –ಸೂಳೆ ಸಂಕವ್ವೆ

"ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ, ಮಾತು ತಪ್ಪಿ ನುಡಿಯಲು ಬಾಯಿಗೆ ಮೂಲ
ವ್ರತ ಹೀನನ ನೆರೆಯಲು ನರಕಕ್ಕೆ ಮೂಲ, ಕರ್ಮ ಹರಕಾಳೇಶ್ವರಾ".
– ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆ

ಬಸವಾದಿ ಶರಣರು ಸ್ತ್ರೀಯರಿಗೂ ಸಮಾನಗೌರವ, ಅವಕಾಶವಿತ್ತ ಕಾರಣ ಪುರುಷರಿಗೆ ಸಮನಾಗಿ ತಮ್ಮ ವೈಚಾರಿಕತೆ ಮತ್ತು ಆಧ್ಯಾತ್ಮಿಕ ಸಾಧನೆ ಮಾಡಿ, ತಮ್ಮ ಅನುಭಾವವನ್ನು ವಚನ ರಚನೆಯ ಮೂಲಕ ತಮ್ಮ ಪ್ರತಿಭೆ ಮೆರೆದಿದ್ದಾರೆ. "ನ ಸ್ತ್ರೀ ಸ್ವಾತಂತ್ರಮರ್ಹತಿ" ಎಂಬ ವಾತಾವರಣದಲ್ಲಿ ೩೩ ಶರಣೆಯರು ವಚನಕಾರ್ತಿಯರಾಗಿ ಕನ್ನಡ ದೇವಿಯನ್ನ ಲಂಕರಿಸಿದ್ದು ವಿಶೇಷ.

ವ್ಯಕ್ತಿ ಮಾಡುವ ಯಾವುದೇ ಕಾಯಕ ಉತ್ತಮ ಫಲ ನೀಡಬೇಕಾದರೆ, ವ್ಯರ್ಥವ್ಯಯ ತಪ್ಪಿಸಬೇಕಾದರೆ ಆ ಕಾಯಕ ನಿರ್ವಹಿಸುವ ತರಬೇತಿ, ನಿಷ್ಠೆ ಮತ್ತು ಕಾರ್ಯತತ್ಪರತೆ ಅತೀ ಅವಶ್ಯಕವಾಗಿದೆ. ಈ ಮೇಲಿನ ಮೂರು ವಚನಗಳಲ್ಲಿ ಶರಣೆಯರು ಇದೇ ವಿಷಯವನ್ನು ತಮ್ಮ ಕಾಯಕ ಪರಿಭಾಷೆಯಲ್ಲಿ ಬಹಳ

ಸುಂದರವಾಗಿ ಅಭಿವ್ಯಕ್ತಿಸಿದ್ದಾರೆ.

ಕೊಟ್ಟಣದ ಸೋಮಮ್ಮ ಕುಟ್ಟುವ, ಥಳಿಸುವ ಕಾಯಕದಾಕೆ. ನೆಲ್ಲನ್ನು ಕುಟ್ಟಲು ಹಾರೆಯನ್ನು ಥಳಿಸುವಾಗ ಒನಕೆಯನ್ನು ಬಳಸುತ್ತಾರೆ. ಈ ಸಾಧನವನ್ನು ಉಪಯೋಗಿಸುವಾಗ ಅದರ ಬಳಕೆಯ ನಿಪುಣತೆ ಇರಬೇಕು. ಹದವರಿತು ನೆಲ್ಲನ್ನು ಕುಟ್ಟಿದಾಗ ಹೊಟ್ಟು ಹೋಗಿ ಅಕ್ಕಿ ಮಾತ್ರ ಉಳಿಯುತ್ತದೆ. ಹದತಪ್ಪಿ ಕುಟ್ಟಿದರೆ ನೆಲ್ಲೆಲ್ಲಾ ನುಚ್ಚಾಗಿ ಪ್ರಯತ್ನಕ್ಕೆ ಉತ್ತಮ ಫಲವಿಲ್ಲದಂತಾಗುತ್ತದೆ.

ಸೂಳೆ ಸಂಕವ್ವೆ ತನ್ನ ಕಾಯಕದಲ್ಲಿ ತಾನು ಕೈಗೊಂಡ ನೀತಿಯನ್ನು ಉಲ್ಲೇಖಿಸಿದ್ದಾಳೆ. ಒತ್ತೆ ಹಿಡಿದು ಮತ್ತೊತ್ತೆಯ ಹಿಡಿಯೆ ಇದರಿಂದ ವ್ಯಕ್ತಿಯ ಚಾರಿತ್ರ್ಯ ಹನನವಾಗುವುದಿಲ್ಲ. ಪಣದಾಸೆಗಾಗಿ ನಾವು ನಿಷ್ಠೆ ಬದಲಿಸುತ್ತಾ ಹೋದರೆ ಆರೋಗ್ಯ ಹಾಳಾಗಿ ಸಾಧನೆ ಎಲ್ಲ ಮಣ್ಣು ಪಾಲಾಗುತ್ತದೆ. ಅದಕ್ಕಾಗಿ ತನ್ನ ಅಂತಃಸಾಕ್ಷಿಗೆ ಆತ್ಮಸಾಕ್ಷಿಗೆ ವಿರುದ್ಧವಾಗಿ ನಡೆದು ಕೊಳ್ಳಲಾರದ ಛಲವಿಲ್ಲಿದೆ.

ಶರಣೆ ಕಾಳವ್ವೆ ಬಡಿಗತನದ ಕಾಯಕದಲ್ಲಿ ಬಳಸುವ ಸಾಧನಗಳ ಪ್ರಸ್ತಾಪ ಮಾಡಿ "ಕೈ ತಪ್ಪಿ ಕೆತ್ತಲು ಕಾಲಿಗೆ ಮೂಲ" ಮಾತು ತಪ್ಪಿ ನಡೆಯಲವು ಬಾಯಿಗೆ ಮೂಲ ಎಂಬ ಎರಡು ಮುಕ್ತಗಳಲ್ಲಿ ಬದುಕಿನಲ್ಲಿ, ಧರ್ಮದಲ್ಲಿ ವ್ಯಕ್ತಿ ಹೊಂದಿರಬೇಕಾದ ಎಚ್ಚರಿಕೆಯನ್ನು ತೋರಿದ್ದಾಳೆ. ಕಟ್ಟಿಗೆಯನ್ನು ಕೆತ್ತುವಾಗ ಕೈ ಮೇಲೆ ಹಿಡಿತ ಕೆಲಸದ ಮೇಲೆ ಪೂರ್ಣದೃಷ್ಟಿ ಮನದಲ್ಲಿ ಏಕಾಗ್ರತೆ ಬೇಕು. ಸ್ವಲ್ಪ ಎಚ್ಚರ ತಪ್ಪಿದರೂ ಕಾಲು ಕತ್ತರಿಸಿಕೊಳ್ಳುವ ಸಾಧ್ಯತೆಯಿದೆ. ಅದೇ ರೀತಿ ಬಾಳಿನಲ್ಲಿ ಮಾತನಾಡುವಾಗ ಬಹಳ ಎಚ್ಚರದಿಂದಿರಬೇಕು. ಶರಣರು ನುಡಿದಂತೆ ನಡೆವ ನಡೆದಂತೆ ನುಡಿವ ಸತ್ಯವಚನ ಪಾಲಿಸುವವರು. ಆದ್ದರಿಂದ ಹತ್ತು ಸಲ ಯೋಚಿಸಿ ಯಾರಿಗೂ ನೋವಾಗದಂತೆ ಎಚ್ಚರವಹಿಸಿ ಸತ್ಯವನ್ನೇ ನುಡಿಯಬೇಕು ಅಕಸ್ಮಾತ್ ಬಾಯಿತಪ್ಪಿ, ಮಾತು ತಪ್ಪಿ ನುಡಿದರೆ ಆ ವ್ಯಕ್ತಿ ಬದುಕಿಗೆ ಭದ್ರಬುನಾದಿಯಾದ ಜನರ ನಂಬುಗೆ ಕಳೆದುಕೊಂಡು ಪರಿತಪಿಸಬೇಕಾಗುತ್ತದೆ.

ಶರಣೆಯರು ಮೇಲೆ ಹೇಳಿದ ಕಾಯಕ ಪರಿಣಿತಿ, ನಿಷ್ಠೆ, ನಿಪುಣತೆ ಮತ್ತು ತನ್ಮಯತೆಯನ್ನು ವ್ರತದಂತೆ ತಪ್ಪದೇ ಪಾಲಿಸುವವರು ತಮ್ಮ ಬದುಕಿನಲ್ಲಿ ವ್ರತಹೀನರ ಜೊತೆ ಸಂಗ ಮಾಡಿದರೆ ತಾವು ನರಕಕ್ಕೆ ಮೂಲ ಎಂಬ ಅರಿವು ಅವರಿಗಿದೆ. ಅರಿಯದೇ ನೆರೆದರೆ ಹೋಗಲಿ ಅರಿತು ನೆರೆದರೆ ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರು ಎಂಬ ಎಚ್ಚರಿಕೆ ನೀಡಿದ್ದಾರೆ. ಈ ವಚನದಲ್ಲಿ ವರ್ಣಾಶ್ರಮ ಧರ್ಮದಲ್ಲಿ ದಲಿತರಿಗೆ ನೀಡುತ್ತಿದ್ದ ಶಿಕ್ಷೆಯ ಪ್ರಸ್ತಾಪವಿದೆ. ಶರಣರಿಗೆ ವ್ರತತಪ್ಪಿದೆ ಇಂಥ ಶಿಕ್ಷೆ ಇರಲಿಲ್ಲ. ಆದರೆ ಅರಿವಿನ ಜನ್ಮ ಪಡೆದ ಆ ಎಲ್ಲ ಶರಣರಿಗೂ ಅವರ ಅಂತಃಸಾಕ್ಷಿ ಪ್ರಜ್ಞೆ ಪೋಲಿಸ್ ಆಗಿ ಕಾರ್ಯಮಾಡುತ್ತದೆ. ಅದರಿಂದಾಗುವ ದುಷ್ಪರಿಣಾಮ ಈ ನರಕಸದೃಶ ಶಿಕ್ಷೆಗೆ ಸಮ ಎಂಬುದು ಅವರ ನಿಲುವಾಗಿದೆ.

**ಬರೆದು ಮತ್ತೆ ತೊಡೆದಡೆ ಆ ಲೇಖ ಶುದ್ಧವಲ್ಲವೆಂದೆ**
**ಹಿರಿದು ಮತ್ತೆ ಮರೆದಡೆ ಆ ಅರಿವಿಂಗೆ ಭಂಗವೆಂದೆ**
**ಸತ್ತ ಮತ್ತ ಸಮುದ್ರವೂ ಸರಿ ಒಕ್ಕುಡತೆಯುದಕವೂ**
**ಸರಿ ಜಾಂಬೇಶ್ವರಾ". —ರಾಯಸದ ಮಂಚಣ್ಣ**

ಶರಣ ರಾಯಸದ ಮಂಚಣ್ಣ ಕಲ್ಯಾಣದಲ್ಲಿ ಬಸವಣ್ಣನವರ ಪತ್ರವ್ಯವಹಾರ ನೋಡಿಕೊಳ್ಳುತ್ತಿದ್ದ ಶರಣ. ಸಂದೇಶವಾಹಕನಾದ ಮಂಚಣ್ಣ ತನ್ನ ಕಾಯಕ ಭಾಷೆಯಲ್ಲಿ ಶಿವಜ್ಞಾನದ ವಿವರ ನೀಡಿದ್ದಾನೆ. ಬರೆಯುವಾಗ ತಪ್ಪಾಗದಂತೆ ಎಚ್ಚರವಹಿಸಬೇಕು. ಒಮ್ಮೆ ಬರೆದು ಅಳಿಸಿದರೆ ಅದು ಶುದ್ಧವಿಲ್ಲವೆಂದಾಗುತ್ತದೆ. ಹಿರಿತನ ವ್ಯಕ್ತಿಯ ಅರಿವಿನಾಚರಣೆಯಿಂದ ಬರುತ್ತದೆ. ಆದರೆ ಹಿರಿಯ ಮರವೆಗೊಳಗಾಗಿ ನಡೆದರೆ ಅವನ ಅರಿವಿಗೆ ಭಂಗವಾಗುತ್ತದೆ. 'ಶಿವಜ್ಞಾನ' ಹಿರಿದಾದುದು. ಮರೆತು ಭುವಿಯಾದರೆ ಅದು ಸಾವಿಗೆ



ಸಮಾನ. ಜ್ಞಾನವಿಲ್ಲದೆ ನಡೆ, ನುಡಿ, ಬದುಕು ವ್ಯಕ್ತಿ ನುಡಿವೆಣ, ನಡೆವೆಣವಾಗಿ ಜೀವಿಸಿದಂತೆ ಬಾಳು ನಿರರ್ಥಕ ಅರಿವಿಲ್ಲದ ಜೀವಿಗೆ ಬೊಗಸೆಯ ನೀರು ಮತ್ತು ಸಾಗರದ ನೀರು ಒಂದೇ ಇದ್ದಂತೆ ಆದ್ದರಿಂದ ಅರಿತು ಶರಣನಾದ ವ್ಯಕ್ತಿ ಮರೆವೆಗೊಳಗಾಗಿ ಜೀವಂತ ಶವದಂತೆ ಬದುಕಬಾರದೆಂಬ ಎಚ್ಚರ ಈ ವಚನದಲ್ಲಿದೆ.

**"ಹಿಡಿಯಲಿಲ್ಲದ ಶಸ್ತ್ರ ಕೀಲಿಲ್ಲದ ಕತ್ತರಿ**
**ಉಭಯ ಒಡಗೂಡದ ಚಿಮ್ಮುಟ, ರೂಹಿಲ್ಲದ ಚಣ**
**ಹಲ್ಲಿಲ್ಲದ ಹಣಿಗೆ ಮಲವಿಲ್ಲದ ಬೆಳಗಿನ ಮುಕುರವ ಹಿಡಿದು**
**ಶರಣರೆಲ್ಲರ ಅಡಿವಿಡದಾಡ ಬಂದೆ**
**ಚೆನ್ನಬಸವಣ್ಣಂಗೆ ಭೃತ್ಯವಾಗಿ ಶರಣ ತತಿಗೆ ಲೆಂಕನಾಗಿ**
**ಸತ್ಯ ಗುರು ಚರದ ಕರ್ತೃ ಸ್ವರೂಪಕ್ಕೆ ಡಿಂಗರಿಗ**
**ಉಭಯ ಡಿಂಗರಿಗರ ಪ್ರತಿ ಡಿಂಗರಿಗರ ಕಂದನೆಂದು**
**ಪ್ರತಿಪಾಲಿಸಿಕೋ ಚೆನ್ನಬಸವಣ್ಣ ಪ್ರಿಯ ಕಮಳೇಶ್ವರ ಲಿಂಗಾ".**
**– ಕನ್ನಡಿ ಕಾಯಕದ ಅಮ್ಮಿದೇವಯ್ಯಾ**

ಶರಣ ಅಮ್ಮಿದೇವನದು ಕ್ಷೌರಿಕ ವೃತ್ತಿ. ತನ್ನಲ್ಲಿ ಬಂದ ಗ್ರಾಹಕರಿಗೆ ಕೆಲವು ರೋಗಗಳಿಗೆ ನಾಟಿ ವೈದ್ಯನಂತೆ ಔಷಧಿ ಕೊಡುತ್ತಿದ್ದನು. ತನ್ನ ಕಾಯಕದಲ್ಲಿ ಬಳಸುವ ಸಾಧನಗಳನ್ನು ತನ್ನ ಆಧ್ಯಾತ್ಮ ಸಾಧನದಲ್ಲಿ ಹೇಗೆ ಕಾರ್ಯನಿರ್ವಹಿಸುತ್ತವೆ ಎಂಬ ವಿವರ ಬಹಳ ಹೊಸ ಸ್ವರೂಪದಲ್ಲಿ ದರ್ಶಿಸಿ ನಮಗೆ ಅಚ್ಚರಿ ಮೂಡಿಸುತ್ತದೆ. ಅವನ ಆಧ್ಯಾತ್ಮಿಕ ಜ್ಞಾನ, ಭೃತ್ಯಾಚಾರದ ನಿಲುವಿಗೆ ಈ ವಚನ ಕನ್ನಡಿಯಾಗಿದೆ.

ಗುರುವಿನಿಂದ ದೀಕ್ಷೆ ಪಡೆದ ಸಾಧಕ ಅರಿವಿನಿಂದ ತನ್ನ ತನುಮನಭಾವದ ತುಮುಲಗಳನ್ನು ಕಳೆದುಕೊಂಡು ಆಧ್ಯಾತ್ಮ ಸಾಧನೆಗೆ ತೊಡಗುತ್ತಾನೆ. ಅರಿವು ಎಂಬ ಬಹುಮುಖೀ ಶಸ್ತ್ರ ಹಿಡಿಯಿಲ್ಲದ ಶಸ್ತ್ರವಾಗಿ, ಕೀಲಿಲ್ಲದ ಕತ್ತರಿಯಾಗಿ, ಕೂಡದ ಚಿಮ್ಮುಟವಾಗಿ, ರೂಹಿಲ್ಲದ ಚಾಣವಾಗಿ ಹಲ್ಲಿಲ್ಲದ ಹಣಿಗೆಯಾಗಿ ತನ್ನ ಸ್ಥೂಲ ಸೂಕ್ಷ್ಮ ಕಾರಣ ಶರೀರದ ವಿಕಾರ ದೂರ ಮಾಡಿ ಇಷ್ಟಲಿಂಗ ಮುಖೇನ ಸ್ವಸ್ವರೂಪ ದರ್ಶಿಸುವ ಲಿಂಗಾಂಗ ಸಾಮರಸ್ಯ ಪಡೆಯುವ ಶುದ್ಧಾತ್ಮನಾಗಿದ್ದಾನೆ. ಶರಣರೆಲ್ಲರಿಗೆ ಭೃತ್ಯನಾಗಿ, ಶರಣಪಥದಿ ಮುನ್ನಡೆಸಿದ ಗುರುವಿಗೆ ಭೃತ್ಯನಾಗಿ ಶರಣಾಗತಿ ಭಾವದಿಂದ ಶರಣರ ಸೇವಕರ ಸೇವಕನಾಗಿ ಕಂದನಂತೆ ಪಾಲಿಸಿಕೋ ಎಂದು ಕಮಳೇಶ್ವರ ಲಿಂಗಕ್ಕೆ ಅರಿಕೆ ಮಾಡಿಕೊಂಡಿದ್ದಾನೆ. ತನಗೆ ಅರಿವಿನಿಂದ ಉದ್ಧಾರಮಾಡಿದ ಕರ್ತೃಸ್ವರೂಪ ಗುರುವಿಗೆ, ಪ್ರೇರಕವಾದ ಲಿಂಗಚೈತನ್ಯಕ್ಕೆ, ಸಹಕರಿಸಿ ಮುನ್ನಡೆಸಿದ ಜಂಗಮರಿಗೆ ದಾಸೋಹ ಭಾವದಿಂದ ತನುಮನಧನವನರ್ಪಿಸುವ, ತನ್ನನ್ನು ಕಂದನಾಗಿ ಪಾಲಿಸಿಕೋ ಎಂಬ ಶರಣಾಗತಿ ಭಾವ, ಕೃತಜ್ಞತಾಭಾವ ಇಲ್ಲಿ ವ್ಯಕ್ತವಾಗಿದೆ.

**"ಅಂಗವೇ ಭೂಮಿಯಾಗಿ ಲಿಂಗವೇ ಬೆಳೆಯಾಗಿ**
**ವಿಶ್ವಾಸವೆಂಬ ಭತ್ತ ಬಲಿದು ಉಂಡು**
**ಸುಖಿಯಾಗಿರಬೇಕೆಂದ ಕಾಮಭೀಮ ಜೀವಧನದೊಡೆಯ".**
**"ಪೈರಿಗೆ ನೀರು ಬೇಕೆಂಬಲ್ಲಿ, ಉಚಿತವನರಿದು ಬಿಡಬೇಕು**
**ಕ್ರೀಗೆ ಅರಿವು ಬೇಕೆಂಬಲ್ಲಿ, ಉಭಯವ ನರಿದು ಘಟಿಸಬೇಕು**
**ಏರಿ ಹಿಡಿವನ್ನಕ್ಕ ನೀರ ಹಿಡಿದಡೆ ಸುಖವಲ್ಲದೆ ಮೀರಿದರುಂಟೆ**
**ಕ್ರಿಯ ಬಿಡಲಿಲ್ಲ, ಅರಿವ ಮರೆಯಲಿಲ್ಲ**

**ಬೆಳೆಯ ಕೊಯ್ದು ಮತ್ತೆ ಹೊಲಕ್ಕೆ ಕಾವಲುಂಟೆ**
**ಫಲಹೊತ್ತ ಪೈರಿನಂತೆ**
**ಪೈರನೊಳಕೊಂಡ ಫಲದಂತೆ, ಅರಿವು ಆಚರಣೆಯೆಲ್ಲನಿಂದು**
**ಆಚರಣೆ ಅರಿವಿನಲ್ಲಿ ಲೇಪವಾದ ಮತ್ತೆ**
**ಕಾಮಭೀಮ ಜೀವಧನದೊಡೆಯನೆಂಬುದ ಭಾವಿಸಲಿಲ್ಲ". –ಒಕ್ಕಲಿಗ ಮುದ್ದಣ್ಣ**

ಒಕ್ಕಲಿಗ ಮುದ್ದಣ್ಣ ಲಿಂಗಾನುಭಾವಿಯಾಗಿ ತನ್ನ ಸಾಧನೆಯನ್ನು ಕೃಷಿ ಸಂಬಂಧಿ ಪರಿಭಾಷೆಯಲ್ಲಿ ಇಲ್ಲಿ ಅಭಿವ್ಯಕ್ತಿಸಿದ್ದಾರೆ.

'ಶಿವಪಥ'ವ ಗುರುವಿನಿಂದ ತಿಳಿದು ಸಾಧನೆ ಮಾಡುವವರಿಗೆ ಅಂಗವೇ ಭೂಮಿಯಾಗಿ ವಿಶ್ವಾಸದಿಂದ ಭಕ್ತಿ ಮಾಡಿ ಪರತತ್ವದ ಬೆಳೆಯನುಂಡು ಪರಮ ಸುಖಿಯಾಗುವನು. ಭೂಮಿಯಲ್ಲಿ ಬೀಜ ಬಿತ್ತಿದ ಮೇಲೆ ಅದು ಚೆನ್ನಾಗಿ ಬೆಳೆಯಲು ಸಕಾಲಕ್ಕೆ ಉಚಿತವನರಿತು ಪೈರಿಗೆ ನೀರುಣಿಸಬೇಕು ಒಡ್ಡಿನ ಅಳತೆ ನೋಡಿ ನೀರುಣಿಸಬೇಕು. ಹೆಚ್ಚಿಗೆ ಬಿಟ್ಟರೆ ಅದು ವ್ಯರ್ಥವಾಗುತ್ತದೆ. ಅದೇ ರೀತಿ ಭಕ್ತಿ ಸಾಧನೆಗೆ ಅಂಗ ಲಿಂಗ ಸ್ವರೂಪಗಳ ಪೂರ್ಣ ಅರಿವಿರಬೇಕು. ಎಲ್ಲ ಆಚರಣೆಗಳು ಈ ಅರಿವಿನ ಮೂಸೆಯಲ್ಲಿ ನಡೆಯಬೇಕು. ಕ್ರಿಯೆ ಮಾಡುವಾಗ ಸದಾ ಮರೆವು ಆವರಿಸದಂತೆ ಎಚ್ಚರವಿರಬೇಕು. ಈ ರೀತಿ ಜಾಗರದಿಂದ ಫಲ ಪಡೆವಾಗ ಅರಿವು ಆಚರಣೆಯಲ್ಲಿ ಆಚರಣೆ ಅರಿವಿನಲ್ಲಿ ನಿಂದಾಗ ಕಾಮಭೀಮ ಜೀವ–ಧನದೊಡೆಯ ಭಾವಿಸಲಿಲ್ಲ. ಬೆಳೆ ಕೊಯ್ದ ಹೊಲಕ್ಕೆ ಕಾವಲು ಬೇಕಾಗಿಲ್ಲ. ಲಿಂಗಾನುಭವಿಯಾದ ಶರಣ ಮರಳಿ ಮತ್ತೆ ಮರೆವೊಳಗಾಗಿ ಮಾನವನಾಗನು. ಹೀಗೆ ಕೃಷಿ ಕಾರ್ಯದ ಪರಿಭಾಷೆಯಲ್ಲಿ ತನ್ನ ಅನುಭವದ ಸಾರವನ್ನು ಶರಣ ಇಲ್ಲಿ ಬಹಳ ಸುಂದರ ಮತ್ತು ಸರಳವಾಗಿ ನಿರೂಪಿಸಿದ್ದಾರೆ.

**"ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು**
**ಹೆಣ್ಣೆಂಬ ಬಟ್ಟಲಲ್ಲಿ ಈಂಟಲಾಗಿ ಲಹರಿ ತಲೆಗೇರಿತ್ತು**
**ಆ ಉನ್ಮತ್ತದಲ್ಲಿ ಮಗ್ನರಾದವರೆಲ್ಲ ಅರುಹಿರಿಯಂತೆಪ್ಪರೋ?"–ಹೆಂಡದ ಮಾರಯ್ಯ**

ಹೆಂಡದ ವೃತ್ತಿಯನ್ನು ಸಹ ಶರಣರು ಸದ್ವೃತ್ತಿಯಾಗಿರಿಸಿಕೊಂಡುದು ಉಲ್ಲೇಖನೀಯ. ಮಾರಯ್ಯ ಈ ವೃತ್ತಿಯವನಾದರೂ ಕೂಡ ಅದರಲ್ಲೇ ಕಾಣಿಸಿರುವ ಅರ್ಥ ಅದೆಷ್ಟು ಮೌಲಿಕ! ಅವನಿಗೆ ಗೊತ್ತಿದೆ ಹೆಂಡ ಸೇವನೆಯಿಂದ ವ್ಯಕ್ತಿ ಉನ್ಮತ್ತನಾಗುತ್ತಾನೆ. ಹೊನ್ನು ಹೆಣ್ಣು ಮಣ್ಣುಗಳಿಗಾಗಿ ಹೋರಾಡುವ ವ್ಯಕ್ತಿಗಳ ಮಧ್ಯ ಹೆಂಡವು ಸೇರಿತೆಂದರೆ ನಿಶೆ ತೆಲೆಗೇರುವುದಂತೂ ಖಂಡಿತ. ಆ ಉನ್ಮತ್ತರಲ್ಲಿ ಅರಿವು ತಲೆಕೆಳಗಾಗುವುದು. ಇಂತಹ ಕಳಂಕವಿಲ್ಲದಂತೆ ಹೆಂಡವ ಪವಿತ್ರವಾಗಿಸಬೇಕೆಂಬುದು ಅವನ ತತ್ವ ಇಂತಹ ವಚನಗಳು ವೃತ್ತಿ ಅನುಭವ ಅದರ ವ್ಯವಹರಣೆ ಮಾತ್ರವಲ್ಲದೆ ಆಯಾ ವೃತ್ತಿ ಸಮುದಾಯದ ಸಂಸ್ಕೃತಿಯನ್ನೇ ಎರಕ ಹೊಯ್ಯುವ ಮಟ್ಟದಲ್ಲಿರುವುದರಿಂದ ವೃತ್ತಿಪರ ಸಮಾಜಗಳ ಮತ್ತು ಅಲ್ಲಿನ ಸಂವಹನದ ಸಮಗ್ರ ಮಾಧ್ಯಮವಾಗಿ ನಿಲ್ಲುತ್ತವೆ.

**"ಹಿರಿದಪ್ಪುದೊಂದು ಭೇರಿಗೆ**
**ಅಂಗುಲದೊಳಡಗಿದ ಕಾಷ್ಠದ ಕುರುಹಿನಿಂದ ಧ್ವನಿಯೊದಗುವಂತೆ**
**ಇಂತೀ ಘಟನಾದದ ಭೇದದ ಎಸಕವ ಬಲ್ಲಡೆ**
**ನಿಃಕಳಂಕ ಮಲ್ಲಿಕಾರ್ಜುನ ಲಿಂಗವ ಬಲ್ಲವನೆಂಬೆ". – ಮೋಳಿಗೆ ಮಾರಯ್ಯ**

ಕಾಶ್ಮೀರದರಸು ಮಹಾದೇವ ಭೂಪಾಲ ಕಲ್ಯಾಣದಲ್ಲಿ ನಡೆಯುತ್ತಿದ್ದ ಶರಣ ತತ್ವ ಶಿವಯೋಗ ಸಾಧನೆಯಿಂದ ಆಕರ್ಷಿತನಾಗಿ ತನ್ನ ಸತಿಯೊಂದಿಗೆ ಬಂದು ಕಟ್ಟಿಗೆ ಮಾರುವ ಕಾಯಕದೊಂದಿಗೆ ಸಾಮಾನ್ಯ ವ್ಯಕ್ತಿಯಾಗಿ ಜೀವನ ನಡೆಸುತ್ತಾ ಲಿಂಗಾನುಭಾವಿಯಾಗುತ್ತಾನೆ. ಅವನ ಸತಿಯೂ ಕೂಡ



ಶಿವಯೋಗಿ ಸಿದ್ಧಿ ಪಡೆಯುತ್ತಾಳೆ.

ದೊಡ್ಡದಾದ ಒಂದು ನಿಸ್ಸಾಳಕ್ಕೆ ಬೆರಳಿನಲ್ಲಿ ಅಡಗಿದ ಕಟ್ಟಿಗೆ ಎಂಬ ನಾದದಂಡದಿಂದ ಅಬ್ಬರ ಹುಟ್ಟುವ ಹಾಗೆ ಅಂಗದಲ್ಲಿ ಚೆನ್ನದ ಸ್ವರೂಪವಾದ ಇಷ್ಟಲಿಂಗ ಸಂಬಂಧವ ಮಾಡಿ ಜ್ಞಾನ ಕ್ರೀವಿಡಿದಾಚರಿಸಿ, ಪ್ರಾಣಲಿಂಗ ಸಂಬಂಧ ಉಂಟು ಮಾಡಿಕೊಳ್ಳಬಲ್ಲಡೆ ಆತನೇ ಇಷ್ಟಲಿಂಗ ಸಂಬಂಧವ ಬಲ್ಲನೆಂದರ್ಥ.

**"ತ್ರಿದೋಷದ ಗುಣದಿಂದ ನಾನಾ ಬಹುತಾಪತ್ರಯದ**
**ವ್ಯಾಧಿಯ ಚಿಕಿತ್ಸೆಯನಾರೂ ಅರಿಯರಲ್ಲಾ**
**ತನುವಿಂಗೆ ವಾತ, ಪೈತ್ಯ, ಶ್ಲೇಷ್ಮ**
**ಆತ್ಮಂಗೆ ಆಣವ, ಮಾಯಾ, ಕಾರ್ಮಿಕ**
**ಇಂತೀ ತ್ರಿವಿಧ ಮಲತ್ವದ ರೋಗ ರುಜೆಯುಡಿಸಿ**
**ಬಂಧನದಲ್ಲಿ ಸಾಯುತ್ತಿದೆ ಅಂಗ**
**ಈ ನಿರೋಗವನರಿವುದಕ್ಕೆ ನಾ ಮೂರು ಬೇರತಂದೆ**
**ಒಂದ ಲಿಂಗದಲ್ಲಿ ಮರ್ದಿಸಿ, ಒಂದು ಆತ್ಮದಿ ಮಥನಿಸಿ**
**ಒಂದ ಅರಿವಿನಲ್ಲಿ ಪಾನವ ಮಾಡಿ**
**ಈ ರೋಗ ಹರಿವುದು; ಇದಕ್ಕನುಪಾನ ಇದಿರೆಡೆಯಿಲ್ಲ**
**ಮರುಳಶಂಕರ ಪ್ರಿಯ ಸಿದ್ಧರಾಮೇಶ್ವರ ಲಿಂಗ ಸಾಕ್ಷಿಯಾಗಿ".– ವೈದ್ಯ ಸಂಗಣ್ಣ**

ಶರಣ ವೈದ್ಯ ಸಂಗಣ್ಣನವರ ವಚನಗಳು ಆಧುನಿಕ ವೈದ್ಯಕೀಯ ವೈಜ್ಞಾನಿಕ ವಿವರಗಳನ್ನೊಳಗೊಂಡ ಕಾರಣ, ಅವರ ವೈದ್ಯಶಾಸ್ತ್ರದ ಜ್ಞಾನಕ್ಕೆ ಸಾಕ್ಷಿಯಾಗಿವೆ. ದೇಹಕ್ಕೆ ತಗಲುವ ಹಲವು ರೋಗಗಳಿಗೆ ಸಿದ್ಧೌಷಧ ಸೂಚಿಸುವ ವೈದ್ಯ ಸಂಗಣ್ಣನವರ ತಮ್ಮ ವಚನಗಳಲ್ಲಿ ನೀಡಿದ ಶಿವಾನುಭಾವದ ವಿವರಗಳು ಅವರ ಏರಿದ ಆಧ್ಯಾತ್ಮದ ಎತ್ತರಕ್ಕೆ ಸಾಕ್ಷಿಯಾಗಿವೆ.

ಪರಿಣಾಮ ಪಾಲನೆ: ಕಾಯಕ ಶರಣರು ರೂಪಿಸಿದ ಅಮೂಲ್ಯ ಪಾರಿಭಾಷಿಕ ಪದ. ಅದು ಪ್ರತಿಯೊಬ್ಬ ಉಪಜೀವನಕ್ಕಾಗಿ ಮಾಡುವ ಪವಿತ್ರಕಾರ್ಯ. ತನ್ನ ವೃತ್ತಿ ಕಾರ್ಯ ನಿರ್ವಹಣೆಯಲ್ಲಿ ತೊಡಗಿದ ಕಾಯ ತ್ರೈಮಲ ದೂರವಾಗಿ ಶಿವಮುಖವಾಗಿ ಚರಿಸುತ್ತಾ ಕೈಲಾಸವಾಗಬೇಕು. ಕಾಯಕದಿಂದ ಬಂದ ಫಲವೆಲ್ಲ ಶಿವನಸೊಮ್ಮು ಎಂಬ ದಾಸೋಹಂ ಭಾವದಿಂದ ಅಸಂಗ್ರಹ ತತ್ವ ಪಾಲಿಸುತ್ತಾ ಅವಶ್ಯಕತೆಯಿದ್ದಷ್ಟು ಬಳಸಿ ಮಿಕ್ಕಿದ್ದನ್ನು ಗುರುಲಿಂಗ ಜಂಗಮರಿಗೆ ದಾಸೋಹ ಮಾಡಿ, ಸಾಮಾಜಿಕ ಜವಾಬ್ದಾರಿಯಿಂದ ಇಡೀ ಜಗತ್ತೇ ಕಲ್ಯಾಣಮಯ ಗೊಳಿಸುವ ವಿಶೇಷತೆ ಪಡೆದಿದೆ. ಮಾನವ ಕೈಗೊಂಡ ಉಪಜೀವನ ವೃತ್ತಿಯ ಗೌರವವನ್ನು ಹೆಚ್ಚಿಸಿ, ಎಲ್ಲ ಕೆಲಸಗಳಿಗೂ ಸಮಾನ ಗೌರವ ಮತ್ತು ಮನ್ನಣೆ ಕಾಯಕದಿಂದ ದೊರಕಿತು. ವರ್ಗಭೇದ ನಿವಾರಿಸಿ ಸಮಾನತೆಯಿಂದ ಎಲ್ಲರೂ ತಮ್ಮ ಕಾಯಕದ ಮೂಲಕ ವೈಯಕ್ತಿಕ ಶುದ್ಧಿ, ಸಾಮಾಜಿಕ ವೃದ್ಧಿ ಮತ್ತು ಸಮಷ್ಟಿಯ ಸಮೃದ್ಧಿಗೆ ಕಾರಣರಾದರು. ಕಾಯಕಕ್ಕೆ ಸಂದ ಈ ಗೌರವದಿಂದ ಸರ್ವಜನರ ಆಧ್ಯಾತ್ಮ ಸಿದ್ಧಿಯಿಂದ ಆಕರ್ಷಿತರಾಗಿ ಬೇರೆ ಬೇರೆ ನಾಡಿನಿಂದ ದೇಶದಿಂದ ಜನರು ಕಲ್ಯಾಣಕ್ಕೆ ಬಂದು ಶರಣರಾಗಿ ಅದ್ಭುತ ಸಾಧನೆ ಮಾಡಿದ್ದಾರೆ. ಅವರ ಕನ್ನಡ ಕಲಿತು ಕನ್ನಡ ಭಾಷೆಯಲ್ಲಿ ವಚನ ರಚಿಸಿ ತಮ್ಮ ಅಂತರಂಗದ ಪ್ರತಿಭೆ ಮರೆದಿದ್ದಾರೆ.

ಶರಣರು ತಮ್ಮ ಜೀವನಾನುಭವ ಮತ್ತು ಶಿವಾನುಭವದ ಅಭಿವ್ಯಕ್ತಿಗೆ ಸಹಜವಾಗಿ ಬಳಸಿದ ಕಾಯಕ ಪರಿಭಾಷೆ ಕನ್ನಡ ಭಾಷೆಯ ಸತ್ವವನ್ನು ಹೆಚ್ಚಿಸಿವೆ. ಅದು ಕನ್ನಡ ಸಾಹಿತ್ಯಕ್ಕೆ ಹೊಸ ಮೆರಗನ್ನು ತಂದಿದೆ. ಕನ್ನಡಿಗರಾದ ನಾವು ಶರಣರಿಗೆ ಶರಣಾಗೋಣ. ಶರಣತತ್ವ ಪಾಲಿಸಿ ನಿಜಕನ್ನಡಿಗರಾಗೋಣ.

*ವಿದ್ಯಾನಗರ, ಸಿರುಗುಪ್ಪ – ೫೮೩೧೨೧ ಬಳ್ಳಾರಿ ಜಿಲ್ಲೆ*
*೯೯೧೬೦೬೪೩೯೫*

# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ


## ಡಾ. ರಾಮಲಿಂಗಪ್ಪ ಟಿ. ಬೇಗೂರು


**ಡಾ. ರಾಮಲಿಂಗಪ್ಪ ಟಿ. ಬೇಗೂರು ಅವರು ಕನ್ನಡ ಪ್ರಾಧ್ಯಾಪಕರು ಹಾಗೂ ವಿಮರ್ಶಕರು. ಮಹಿಳಾ ಸಾಹಿತ್ಯ, ವಚನಸಾಹಿತ್ಯ ಹಾಗೂ ಹಳಗನ್ನಡ ಸಾಹಿತ್ಯ ಇವರ ವಿಶೇಷ ಆಸಕ್ತಿಯ ಕ್ಷೇತ್ರಗಳಾಗಿವೆ. ಪ್ರಸ್ತುತ ಇವರು ಕೆಂಗೇರಿಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಮಹಿಳೆ ಚರಿತ್ರೆ ಪುರಾಣ ಇವರ ಮುಖ್ಯವಾದ ಕೃತಿಯಾಗಿದೆ. ಪ್ರಗತಿಪರ ಚಿಂತಕರಾದ ಇವರು ಈ ಬಾರಿ ಶರಣ ಕ್ರಾಂತಿಗೆ ನನ್ನ ಪ್ರತಿಕ್ರಿಯೆಯನ್ನು ನೀಡಿದ್ದಾರೆ.**

೧. ಶರಣ ಚಳುವಳಿಯನ್ನು ಮತ್ತೆ ನಿರೀಕ್ಷಿಸಬಹುದೆ?
೨. ಶರಣ ಚಳುವಳಿಯನ್ನು ಆರಾಧನಾ ನೆಲೆಯಿಂದ ನೋಡುತ್ತಿರುವುದೇ ಅದರ ಪ್ರಾಯೋಗಿಕ ನೆಲೆಗಳ ಅಳವಡಿಕೆಗಿರುವ ತೊಡಕು ಎನ್ನಬಹುದೆ?
೩. ಶರಣ ಚಳುವಳಿಯ ಮುಕ್ತತೆಯೇ ಕಳೆದುಹೋಗಿ, ಅದನ್ನು ಸಂಸ್ಥೀಕರಿಸುವ ಪ್ರಯತ್ನಗಳೇ ಮುಂಚೂಣಿಗೆ ಬಂದಿವೆ ಎನ್ನುವ ಅಭಿಪ್ರಾಯವನ್ನು ನೀವು ಒಪ್ಪುತ್ತೀರಾ?
೪. ದಲಿತ ಸಂಕಥನಕ್ಕೆ ಶರಣ ಚಳುವಳಿಯ ಕೊಡುಗೆಗಳು:
೫. ಶರಣರ ಸಮುದಾಯದ ಪರಿಕಲ್ಪನೆ ಯಾವುದು? ಅದಕ್ಕೊಂದು ಸಮಗ್ರತೆ ಇದೆಯೇ?
೬. ಲಿಂಗನ್ಯಾಯದ ಪರಿಕಲ್ಪನೆ ಶರಣರಲ್ಲಿ ಸ್ಪಷ್ಟವಾಗಿ ಬೇರೂರಿತ್ತು ಎಂದು ನಿಮಗನಿಸುತ್ತದೆಯೇ?
೭. ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕ ಅಸ್ತಿತ್ವ ಇದೆಯೇ?
೮. ನಿಮಗೆ ಪ್ರಿಯರಾದ ವಚನಕಾರರು ಹಾಗೂ ವಚನಕಾರ್ತಿಯರನ್ನು ಕುರಿತು ವಿವರವಾಗಿ ಹೇಳಿ.
೯. ಹೆಣ್ಣು ಮತ್ತು ಆರ್ಥಿಕ ಸ್ವಾವಲಂಬನೆಯ ಹೊಳಹುಗಳನ್ನು ವಚನಕಾರ್ತಿಯರಲ್ಲಿ ಗುರುತಿಸಲು ಸಾಧ್ಯವಿದೆಯೇ?
೧೦. ಸಹಿಷ್ಣುತೆಯನ್ನು ಶರಣ ಚಳುವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೇ?
೧೧. ವಚನಗಳ ಕಾವ್ಯ ಸೌಂದರ್ಯವನ್ನು ಕುರಿತು ಹೇಳಿ.
೧೨. ಶರಣ ಚಳುವಳಿಯಲ್ಲಿ ನಿಮಗೆ ಅತ್ಯಂತ ಪ್ರಿಯವಾದ ಅಂಶಗಳು ಯಾವುವು?
೧೩. ವಚನಕಾರರನ್ನು ಮಾದರಿಯಾಗಿ ನೋಡುವುದರ ಬಗ್ಗೆ ನಿಮ್ಮ ಆಲೋಚನೆಗಳು:

(ಇಲ್ಲಿನ ಎಲ್ಲ ಪ್ರಶ್ನೆಗಳನ್ನೂ ಈ ಬರೆಹದಲ್ಲಿ ಇಲ್ಲಿ ಕೊಟ್ಟಿರುವ ಕ್ರಮದಲ್ಲಿಯೆ ಉತ್ತರಿಸಿಲ್ಲ; ಕಲಸಲಾಗಿದೆ.)

ಮೊದಲಿಗೆ ಶರಣರ ಸಮುದಾಯದ ಪರಿಕಲ್ಪನೆಯ ಬಗ್ಗೆ ಗಮನ ಹರಿಸೋಣ: ಶರಣರ ನುಡಿಗಡಣ, ಶರಣರ ಸಂಗ, ಕೂಡಲಸಂಗನ ಶರಣರು, ಶಿವಶರಣ, ಮಹಾಶರಣ, ಶುದ್ಧಶರಣ, ಸತ್ಯಶರಣ, ಲಿಂಗಶರಣ, ಜಂಗಮಶರಣ, ಪ್ರಸಾದ ಶರಣ ಹೀಗೆ ಆರು ಸಾವಿರಕ್ಕೂ



ಹೆಚ್ಚಿನ ಅನೇಕ ಬಗೆಯ ಶರಣ ಸಂಬಂಧಿ ಪದಗಳನ್ನು ಶರಣರು ತಮ್ಮ ವಚನಗಳಲ್ಲಿ ಬಳಸಿದ್ದಾರೆ. ವಿವಿಧ ಕಸುಬು, ಲಿಂಗ, ಜಾತಿ, ವರ್ಗ, ವರ್ಣ, ಧರ್ಮಗಳಿಗೆ ಸೇರಿದವರನ್ನೆಲ್ಲ ಶಿವೋಪಾಸನೆಯ ಅಡಿಗೆ ತಂದು ಒಳಗೊಂಡು ಅವರನ್ನೆಲ್ಲ ಶಿವಶರಣರೆಂದು ಇವರು ಕರೆದುಕೊಂಡಿದ್ದಾರೆ. ಹಾಗಾಗಿ ಶರಣರ ಸ್ವ ಸಮುದಾಯದ ಕಲ್ಪನೆ ಶಿವಶರಣ ಸಮುದಾಯದ ಕಲ್ಪನೆಯೇ ಆಗಿದೆ. ಲೋಕವನ್ನು ಬೈನರಿಯಾಗಿ ಭಕ್ತ ಮತ್ತು ಭವಿ ಎಂದು ಎರಡೇ ಪಂಗಡವಾಗಿ ನೋಡುವ ಇವರು ಶಿವಭಕ್ತರನ್ನು ಭಕ್ತರೆಂದೂ ಮಿಕ್ಕುಳಿದ ಅನ್ಯರನ್ನೆಲ್ಲ ಭವಿಗಳೆಂದೂ ಕರೆದುಕೊಂಡಿದ್ದಾರೆ. ಹಾಗಾಗಿ ಇವರ ಪ್ರಕಾರ ಲೋಕದಲ್ಲಿ ಇರುವುದು ಎರಡೇ ಸಮುದಾಯಗಳು; ನಮ್ಮವರು ಮತ್ತು ನಮ್ಮವರಲ್ಲ ಎಂಬ ಸ್ಥೂಲವಾದ ಭಕ್ತ-ಭವಿ ಸಮುದಾಯಗಳು.

ಶರಣ ಸಮುದಾಯ ಕಾಯಕ ಜೀವಿಗಳ ಸಮುದಾಯ. ಕಾಯಕತತ್ವ ಮತ್ತು ದಾಸೋಹ ತತ್ವಗಳು ಇಡೀ ಶರಣ ಸಮುದಾಯವನ್ನು ರೂಪಿಸಿವೆ. ಇಲ್ಲಿ ಉಳ್ಳವರು ಮತ್ತು ಇಲ್ಲದವರು ಎಂಬ ಎರಡು ವರ್ಗವಾಗಿ ಸಮಾಜವನ್ನು ಒಡೆಯುವುದನ್ನು ತಪ್ಪಿಸುವ ಒಂದು ಬಾಳಿನ ಕ್ರಮವಾಗಿ ಈ ತತ್ವಗಳನ್ನು ಆಚಾರಗಳಾಗಿ ಚಾಲ್ತಿಗೆ ತರಲಾಗಿದೆ. ದಾಸೋಹ ತಾವು ದುಡಿದ ದುಡಿಮೆಯನ್ನು ಜನರೊಂದಿಗೆ ಹಂಚಿ ಉಣ್ಣುವ ತತ್ವ. ಎಲ್ಲವನ್ನೂ ಬಾಚಿ ಗುಡ್ಡೆ ಮಾಡಿಕೊಳ್ಳದೆ ಇತರರಿಗೆ ಹಂಚಬೇಕು ಎಂಬ ಆಚಾರವಿದು. ದುಡಿಯದೆ ದಾಸೋಹ ಮಾಡುವ ಪ್ರಶ್ನೆ ಇಲ್ಲ. ಆಯ್ದಕ್ಕಿ ಲಕ್ಕಮ್ಮ ಮತ್ತು ಆಯ್ದಕ್ಕಿ ಮಾರಯ್ಯ ಇವರ ವಚನಗಳು ದುಡಿದು ಮಾತ್ರ ದಾಸೋಹ ಮಾಡಬೇಕು ಎಂದು ಹೇಳುತ್ತವೆ. ಅತಿಯಾದ ಸಂಪತ್ತಿನ ಸಂಗ್ರಹ ಮಾಡಕೂಡದು ಎಂಬ ಆಚಾರವನ್ನು ಶರಣರು ಪಾಲಿಸುತ್ತಿದ್ದವರು. ಹಾಗಾಗಿ ಬಡವ ಬಲ್ಲಿದ ಎಂಬ ವರ್ಗೀಕರಣ ಇಲ್ಲದಂತಹ ಸಮುದಾಯವನ್ನು ನಿರ್ಮಿಸುವ ಆಶಯ ಶರಣ ಚಳುವಳಿಯದ್ದು. ಎಲ್ಲರೂ ಕಾಯಕ ಮಾಡಿ ಹಂಚಿ ಬದುಕುವ ಸಮಸುಖ ಸಮದುಃಖದ ಸಮುದಾಯದ ಕಲ್ಪನೆ ಅವರದ್ದಾಗಿತ್ತು. ಅದೊಂದು ಸಮಸಮಾಜದ ಕಲ್ಪನೆ.

ಅದಕ್ಕೊಂದು ಸಮಗ್ರತೆ ಇದೆಯೆ ಎಂದರೆ ಅಜಮಾಸು ಇದೆ. ಅಷ್ಟಾವರಣ ಕಲ್ಪನೆ, ಷಟ್‌ಸ್ಥಲ ಸಿದ್ಧಾಂತ, ಪಂಚಾಚಾರ ಕಲ್ಪನೆ, ಏಕದೇವೋಪಾಸನೆ-ಶಿವತತ್ವ, ಸ್ಥಾವರ ಲಿಂಗ ನಿರಾಕರಣೆ ಮತ್ತು ಇಷ್ಟಲಿಂಗಾರ್ಚನೆಯ ಪ್ರತಿಪಾದನೆ, ಮಾತೆಂಬುದು ಜ್ಯೋತಿರ್ಲಿಂಗ ಎಂಬ ಭಾವನೆ, ದೇಗುಲ ಮತ್ತು ಮೂರ್ತಿಪೂಜೆ ನಿರಾಕರಣೆ, ವೇದ ಪುರಾಣ ಅವತಾರಗಳ ನಿರಾಕರಣೆ, ಲೀಲೆ ಪುನರ್ಜನ್ಮ ಸ್ವರ್ಗ ನರಕಗಳ ನಿರಾಕರಣೆ, ಕಾಯಕವೆ ಕೈಲಾಸವೆಂಬ ನಂಬಿಕೆಯ ಕಾಯಕ ನಿಷ್ಠೆ, ದಾಸೋಹ ತತ್ವ, ದೇಹವೇ ದೇಗುಲವೆಂಬ ನಂಬಿಕೆ, ಗುರು ಲಿಂಗ ಜಂಗಮ ಪ್ರಸಾದ ಪಾದೋದಕ ಕಲ್ಪನೆಗಳು, ಶರಣಸತಿ ಲಿಂಗಪತಿ ಕಲ್ಪನೆ, ಪಶು ಪಶುಪತಿ ಕಲ್ಪನೆ, ಅನುಭವ ಮಂಟಪದ ಕಲ್ಪನೆ, ನಡೆ ನುಡಿ – ಅಂತರಂಗ ಬಹಿರಂಗಗಳ ಒಂದುತನದ ಕಲ್ಪನೆ, ತನು ಮನ ಭಾವಗಳ ಒಂದುತನದ ಕಲ್ಪನೆ, ದೇವ ಭಕ್ತ ಎಂಬ ಎರಡಳಿದ ಅದ್ವಯದ ಸ್ಥಿತಿಯ ಕಲ್ಪನೆ, ಜ್ಞಾನ ಮತ್ತು ಕ್ರಿಯೆಗಳ ಸಂಗಮದ ಕಲ್ಪನೆ, ಖಾಸಗಿ ಆಸ್ತಿಯ ನಿರಾಕರಣೆಯ ತತ್ವಾಚಾರ, ಅಪರಿಗ್ರಹ ತತ್ವಾಚಾರ, ತನ್ನ ಬಣ್ಣಿಸದ ಇದಿರ ಹಳಿಯದ ತತ್ವಾಚಾರ, ಕೀಳಿಂಗೆ ಹಯನು ಕರೆಯುವುದೆಂಬ ನಂಬಿಕೆ, ಅರುಹು ಕುರುಹಿನ ಕಲ್ಪನೆ, ಶೂನ್ಯತೆಯ ಕಲ್ಪನೆ ಹೀಗೆ ಹತ್ತು ಹಲವು ಇತಿಮಿತಿಗಳೂ ಮತ್ತು ಕ್ರಾಂತಿಕಾರಕ ಪರ್ಯಾಯ ತತ್ವಾಚಾರಗಳೂ ಚಾಲ್ತಿಗೆ ಬಂದ ಚಳವಳಿಯದು. ಒಂದು ಸ್ವತಂತ್ರ ಧರ್ಮ ಆಗಬಲ್ಲ ಎಲ್ಲ ಸಾಧ್ಯತೆಗಳೂ ಇದ್ದ ಸಮುದಾಯ ಅದು. ಆದರೆ ಜಾತಿವರ್ತುಲದಲ್ಲಿ ಬಿದ್ದ ಶರಣ ಚಳವಳಿ

ಕಾಲಾನಂತರದಲ್ಲಿ ತಾನೂ ಒಂದು ಜಾತಿಯೇ ಆಯಿತೆನ್ನುವುದು (ಹಲವು ಜಾತಿಗಳ ಒಂದು ಶ್ರೇಣಿ ಆಯಿತು ಎನ್ನುವುದು) ಈಗ ಚರಿತ್ರೆ. ಇದನ್ನೆ ನಾವು ಸಮಗ್ರತೆ ಎಂದು ಕರೆಯುವ ಹಾಗಿದ್ದರೆ ಕರೆಯಬಹುದು. ಆದರೆ ಆ ರೀತಿ ನಾವು ಭಾವಿಸುವ ಮತ್ತು ಅಪೇಕ್ಷಿಸುವ ಸಮಗ್ರತೆ ಶರಣ ಚಳವಳಿಗಲ್ಲ ಯಾವುದೇ ಕಾಲದ ಚಳವಳಿಗೂ ಸಮಾಜಕ್ಕು ಇರಲು ಸಾಧ್ಯವಿಲ್ಲ. ಹಾಗೆ ನೋಡಿದರೆ ಸಮಗ್ರತೆ ಎಂಬುದೇ ಒಂದು ಯುಟೋಪಿಯಾ. ಅರೆಕೊರೆತನವೇ, ಅಸಮಗ್ರತೆಯೆ ವಾಸ್ತವ.

ಈಗ ಶರಣ ಚಳುವಳಿಯನ್ನು ಮತ್ತೆ ನಿರೀಕ್ಷಿಸಬಹುದೇ? ಎಂಬ ಪ್ರಶ್ನೆಗೆ ಬರೋಣ: ಅದನ್ನೆ ತದ್ವತ್ತಾಗೆ ಏತಕ್ಕೆ ನಿರೀಕ್ಷಿಸಬೇಕು? ದೇವರ ನಂಬಿಕೆಯ ನೆಲೆಯಲ್ಲಿ; ಭಕ್ತಿಯ ನೆಲೆಯಲ್ಲಿ, ಧರ್ಮದ ನೆಲೆಯಲ್ಲಿ ಜನರನ್ನು ಸಂಘಟಿಸುವ ಅಗತ್ಯವಿಲ್ಲ. ಲಿಂಗಸಮಾನತೆ, ಕಾಯಕತತ್ವ, ದಾಸೋಹ ತತ್ವ, ಅಪರಿಗ್ರಹ, ಅಪವರ್ಗೀಯತೆ, ಸಮಸಮಾಜದ ನಿರ್ಮಾಣ, ಜಾತಿಪದ್ಧತಿಯ ನಿರ್ಮೂಲನೆ, ಸಂವಾದ ಸಾಧ್ಯತೆ ಉಳ್ಳ ವೈಚಾರಿಕ ಸಮಾಜದ ನಿರ್ಮಾಣ ಇಂತಹ ಹತ್ತು ಹಲವು ಸಾಮಾಜಿಕ ಕ್ರಾಂತಿಕಾರಕ ಕ್ರಮಗಳನ್ನು ಆಚರಣೆಗೆ ತಂದ ಶರಣರ ನಡೆ ಯಾವತ್ತೂ ಅನುಕರಣೀಯ. ಆದರೆ ಭಕ್ತಿ-ಏಕದೇವತಾ ಉಪಾಸನೆ ಆಗಲಿ, ಇಷ್ಟಲಿಂಗ ಆರಾಧನೆ ಆಗಲಿ, ದೇಹವೇ ದೇಗುಲವೆಂಬ ಕಲ್ಪನೆ ಆಗಲಿ ಇಂತಹ ಯಾವುದೇ ನೆಲೆಗಟ್ಟಿರುವ ಭಕ್ತಿ ಆದರೂ ಇಂದಿಗೆ ಭಕ್ತಿಮಾರ್ಗವು ಖಂಡಿತಾ ಪ್ರಸ್ತುತವಾದ ಮಾರ್ಗ ಅಲ್ಲ. ಯಾವತ್ತೂ ಚರಿತ್ರೆ ತದ್ವತ್ ಆಗಿ ಪುನರಾವರ್ತನೆ ಆಗಕೂಡದು. ಪರಿಷ್ಕೃತವಾಗಿ ಅಳವಡಿಕೆ ಆಗಬೇಕು.

ಪರಿಷ್ಕೃತ ಶರಣ ಚಳವಳಿ, ಇಂದಿನ ಅಗತ್ಯಕ್ಕೆ ಮುಂದಣ ಅಗತ್ಯಕ್ಕೆ ಬೇಕಾದ ರೂಪಾಂತರಿತ ವಿಶ್ವಮಾನವ ಚಳವಳಿ ರೂಪಗೊಳ್ಳುವುದಾದರೆ ಆಗಲಿ. ಆದರೆ ಹಲವು ಮಿತಿಗಳಿರುವ ಶರಣ ಚಳವಳಿಯ ತದ್ವತ್ ಪುನರಾಗಮನ ಅಗತ್ಯವಿಲ್ಲ. ಹಾಗೆ ಯಾರೂ ನಿರೀಕ್ಷಿಸಬಾರದು. ಅವತಾರಪುರುಷರನ್ನು (ಕಾಳಿ ಚೌಡಿ ಇಂತಹ ಮಹಿಳೆಯರನ್ನು!?) ಮತ್ತೆ ಮತ್ತೆ ಅವತಾರ ಎತ್ತಿ ಎಂದು ಕೇಳುವ ಸಮಾಜ ಹೇಗೆ ನಿಸ್ಸತ್ವ ಸಮಾಜವೋ ಹಾಗೆಯೆ ಚರಿತ್ರೆಯ ಒಂದು ತುಣುಕು ಮತ್ತೆ ಅವತರಿಸಬೇಕು ಎಂಬುದೂ ಕೂಡ ನಿಸ್ಸತ್ವದ ಸಂಕೇತ. ಅಂದಿನವರ ಆಚಾರ ವಿಚಾರಗಳಲ್ಲಿ ನಮಗೆ ಇಂದಿಗೆ ಯಾವುದು ಹೇಗೆ ಎಷ್ಟು ಬೇಕೋ ಅದನ್ನು ಎತ್ತಿಕೊಂಡು ಬಾಳುವುದು ಇಂದಿನ ಅಗತ್ಯ ಆಗಬೇಕು. ಬರಿ ಬಸವ ಅಕ್ಕ ಅಲ್ಲಮ ಮಾತ್ರವಲ್ಲ ಗಾಂಧಿ, ಮಾರ್ಕ್ಸ್, ಬುದ್ಧ, ಅಂಬೇಡ್ಕರ್, ಕುವೆಂಪು ಎಲ್ಲರ ವಿಚಾರದಲ್ಲು ಇದು ನಿಜ. 'ಮತ್ತೆ ಕಲ್ಯಾಣ' ಎಂಬ ಕಾರ್ಯಕ್ರಮ ಮಾಡಿ ಅದರಿಂದ ಜನರಿಗೆ ಸ್ವಲ್ಪ ವಿಚಾರ ಜಾಗೃತಿ ಮೂಡಿಸುವುದಾದರೆ ಅಷ್ಟರಮಟ್ಟಿಗೆ ಅದು ಸಾರ್ಥಕವಾದ ಕೆಲಸವೇ. ಆದರೆ ಮತ್ತೆ ಕಲ್ಯಾಣವನ್ನು ಸೃಷ್ಟಿಸಲು ಸಾಧ್ಯವೆ? ನಾವು ಎಷ್ಟು ಸಮಾನತೆ, ಪ್ರಗತಿ ಸಾಧಿಸಬೇಕೋ ಅಷ್ಟು ಸಾಧಿಸಿಲ್ಲ ನಿಜ. ಆದರೆ ರಾಜಕೀಯ 'ಸ್ವ ಆಡಳಿತ', ಸ್ವಾಂತಂತ್ರ್ಯ ಪಡೆದು, 'ಪ್ರಜಾಪ್ರಭುತ್ವ' ವ್ಯವಸ್ಥೆಯಲ್ಲಿ ವಿಜ್ಞಾನ ಯುಗದಲ್ಲಿ ಬಹಳ ದೂರ ಸಾಗಿ ಬಂದಿರುವ ನಾವು ಹಿಂದಣ ಒಳಿತುಗಳನ್ನೆಲ್ಲ ಹೀರಿ ಜಾರಿ ಮಾಡಿ ಮುಂದೆ ಹೋಗಬೇಕಲ್ಲವೆ?

ಇನ್ನು ಎರಡನೆ ಪ್ರಶ್ನೆಗೆ ಬರೋಣ; ಶರಣ ಚಳವಳಿ ಸೃಷ್ಟಿಯಾಗಿ ಬೆಳೆದದ್ದೆ ಶಿವನ ಆರಾಧನೆಯ ನೆಲೆಯಿಂದ. ಇದು ಅಂದಿಗೆ ಜಡಗೊಂಡಿದ್ದ ಸನಾತನ ಪುರೋಹಿತಶಾಹಿ ಸಮಾಜದ ವಿರುದ್ಧ ಬಂಡಾಯ ಹೂಡಿ ಸಂಘರ್ಷದ ಹಾದಿಯಲ್ಲಿ ಬೆಳೆದ ಆಂದೋಲನ. ಅಲ್ಲೊಬ್ಬರು, ಇಲ್ಲೊಬ್ಬರು ಅಜ್ಞಾತ ಅನಾತ್ಮವಾದಿಗಳು ಶರಣರಲ್ಲಿ ಇದ್ದಾರೆ. ಅಂತಹ ಪ್ರಖರ ಅನಾತ್ಮವಾದಿಗಳ; ಲಾಂಛನವಿರೋಧಿಗಳ ಪ್ರತಿನಿಧಿ ಅಲ್ಲಮ. ಚೆನ್ನಬಸವಣ್ಣ ಧರ್ಮದ



ಪ್ರತಿಪಾದಕನಾದರೆ ಅಲ್ಲಮ ವಿಸರ್ಜಕ. ಅಲ್ಲಮನಂತಹ ಒಬ್ಬಿಬ್ಬರನ್ನು ಬಿಟ್ಟರೆ ಮಿಕ್ಕ ಶರಣರೆಲ್ಲ ಬಹುಪಾಲು ಆರಾಧನಾ ದಾರಿಯವರೆ. ನಾವು ಕೂಡ ಈ ಆಂದೋಲನವನ್ನು ಇಂದು ನೋಡುತ್ತಿರುವುದು ಅತಿಯಾದ ನಿರೀಕ್ಷೆ ಮತ್ತು ಭಕ್ತಿಯ ಕಣ್ಣುಗಳಿಂದಲೆ. ನಾವು ಬಹುಮಂದಿ ಬಸವಣ್ಣನಾದಿಯಾಗಿ ಎಲ್ಲ ಶರಣರನ್ನೂ ಜಾತೀಯ, ಪಂಥೀಯ, ಮಠೀಯ ಮತ್ತು ದೈವಿಕ ನೆಲೆಗಳಿಗೆ ಬಂಧಿಸಿಯೆ ಇಟ್ಟಿದ್ದೇವೆ, ಇಡುತ್ತಿದ್ದೇವೆ. ವಿಚಾರವಾದಿಗಳನ್ನು ಹೋರಾಟಗಾರರನ್ನು ಯಾರು ಭಜನೆ ಮಾಡುತ್ತಾರೊ ಅವರು ಭಕ್ತರಾಗಲು ಸಾಧ್ಯವೇ ವಿನಃ ಕ್ರಾಂತಿಕಾರಿಗಳಾಗಲು ಸಾಧ್ಯವಿಲ್ಲ. ಯಾವುದೇ ಹೋರಾಟವನ್ನು ದೈವಾರಾಧನೆಗೆ ಅಥವಾ ಧರ್ಮವೊಂದಕ್ಕೆ ಸೀಮಿತಗೊಳಿಸಿದ ಕೂಡಲೇ; ಇತರರಿಗೆ ಅದೊಂದು ಅನ್ಯ ಆಗಿ ಕಾಣತೊಡಗುತ್ತದೆ. ಅಷ್ಟೇ ಅಲ್ಲ, ಸ್ವ ಸಮುದಾಯದ ಒಳಪಂಗಡಗಳೂ ಕಾಲಾನಂತರದಲ್ಲಿ ಸೃಷ್ಟಿಯಾಗಿ ಅಂತಃಕಲಹವೂ ಹುಟ್ಟುತ್ತದೆ. ಈಗ ಲಿಂಗಾಯತ ವೀರಶೈವಗಳೇ ಪರಸ್ಪರ ಅನ್ಯ ಆಗಿಬಿಟ್ಟಿವೆ. ವೀರಶೈವ ಲಿಂಗಾಯತ ಮಾತ್ರವಲ್ಲ ಸಾದ, ನೊಣಬ, ವಿರಕ್ತ, ಪಂಚಮಸಾಲಿ ಇತ್ಯಾದಿ ಹೀಗೆ ಇಲ್ಲೂ ಒಳಜಾತಿಗಳ ಒಂದು ಅಸಮಾನ ಶ್ರೇಣಿಯೇ ಸೃಷ್ಟಿಯಾಗಿದೆ. ಇನ್ನೂ ಹೊರಗಿನ ಜಾತಿ, ಮತ, ಪಂಥಗಳಿಗೆ ಈ ಶರಣ ಸಮುದಾಯ ಯಾವತ್ತೂ ಅನ್ಯವೇ.

ನಿಜ; ಇಂದು ಶರಣ ಚಳುವಳಿಗೆ ಇದ್ದ ಮುಕ್ತತೆ ಕಳೆದುಹೋಗಿದೆ. ಅದಕ್ಕೆ ಹನ್ನೆರಡನೆಯ ಶತಮಾನದಿಂದ ಇಂದಿನವರೆಗೆ ಶರಣ ಚಳುವಳಿಯನ್ನು ನಮ್ಮವರು ಅನುಸಂಧಾನ ಮಾಡುತ್ತ ಬಂದ ಬಗೆಗಳೇ ಕಾರಣ. ಕಲ್ಯಾಣದಲ್ಲಿ ವಿಘಟಿತವಾಗಿ ಚಳವಳಿ ಕರ್ನಾಟಕದ ಹಲವಾರು ಭಾಗಗಳಿಗೆ ವಿಸ್ತರಣೆಯಾದ ನಂತರ ಇದು ಒಂದು ಸಾಮಾಜಿಕ ಬದಲಾವಣೆ ಮತ್ತು ಸಮಸಮಾಜದ ನಿರ್ಮಾಣದ ಯತ್ನವಾಗಿ ಬೆಳೆಯದೆ ಪ್ರತ್ಯೇಕೀಕರಣ ಮತ್ತು ಶ್ರೇಷ್ಠೀಕರಣ ಕ್ರಿಯೆಗಳಲ್ಲಿ ಬೆಳೆದಿದೆ. ಇದಕ್ಕೆ ಸಂಸ್ಕೃತಕ್ಕೆ ಜೋತುಬಿದ್ದು ಜನಭಾಷೆಯಿಂದ ದೂರವಾದದ್ದು; ಮುಕ್ತತೆಗೆ ತಿಲಾಂಜಲಿ ನೀಡಿ ಧರ್ಮ ಪಂಥವಾಗಿ ಸಮಾಜವನ್ನು ಕಟ್ಟತೊಡಗಿದ್ದು; ಸಾಧು ಸಂತರು ಮಠಾಧೀಶರಾಗಿ ಮಠಮಾನ್ಯಗಳನ್ನು ಕಟ್ಟತೊಡಗಿದ್ದು; ಎಲ್ಲ ಜಾತಿಗಳನ್ನು ಒಳಗೊಳ್ಳುವ ಮುಕ್ತತೆ ತಾನೇ ಒಂದು ಜಾತಿಯಾಗಿ ರೂಪಗೊಂಡು ಮಿಕ್ಕೆಲ್ಲರಿಗೆ ಬಾಗಿಲು ಮುಚ್ಚಿದ್ದು; ವಿಚಾರಪ್ರಜ್ಞೆ ಇಳಿಕೆ ಕಂಡು ಆರಾಧನಾ ಭಾವವೇ ಆವರಿಸಿಕೊಂಡದ್ದು ಹೀಗೆ ಇದಕ್ಕೆ ಹತ್ತು ಹಲವು ಕಾರಣಗಳಿವೆ.

ಬಸವಣ್ಣ ಲಿಂಗಾಯತರವನು, ಅಂಬೇಡ್ಕರ್ ದಲಿತರ ನಾಯಕ, ಕುವೆಂಪು ಒಕ್ಕಲಿಗರ ದಾರ್ಶನಿಕ ಹೀಗೆ ನಾವು ಹೋರಾಟಗಾರರನ್ನು ಒಂದೊಂದು ಜಾತಿಗಳಿಗೆ ಸೀಮಿತಗೊಳಿಸುತ್ತಿದ್ದೇವೆ. ಹಾಗೆಯೇ ಇಡಿಯಾಗಿ ಶರಣ ಚಳುವಳಿಯನ್ನೂ ಒಂದು ಕಡೆ ಶೈವಭಕ್ತಿ ಚಳುವಳಿ ಎಂಬ ಹಣೆಪಟ್ಟಿ ಹಚ್ಚಿ, ಅನ್ಯವಾಗಿ ಕಾಣುತ್ತಿದ್ದೇವೆ. ಇನ್ನೊಂದು ಕಡೆ ಇದರ 'ವಾರಸುದಾರರು' ಇದನ್ನು ಸರ್ವರೋಗಾಪಹಾರಿ, ಪವಿತ್ರ-ಪೂಜಾರ್ಹವೆಂದು ಆರಾಧನಾ ಭಾವದಿಂದ ಕಾಣುತ್ತಿದ್ದಾರೆ. ವಿಚಾರ ಮತ್ತು ಆಚಾರ; ಜ್ಞಾನ ಮತ್ತು ಕ್ರಿಯೆ ಎರಡನ್ನೂ ಒಗ್ಗೂಡಿಸಿಕೊಂಡು ಹೋಗುತ್ತಿದ್ದ ಶರಣರ ಜೀವನ ಚಿಂತನೆ- ಜೀವನ ಕ್ರಮಗಳನ್ನು ಇಂದಿನ ನಾವು ಹೀಗಾಗಿ ಒಂದು ಕಡೆ ನಮ್ಮದಲ್ಲ ಎಂಬ ವೈರಿನೆಲೆಯಲ್ಲಿ ಇನ್ನೊಂದೆಡೆ ಪೂಜ್ಯಾರ್ಹ ಎಂಬ ಆರಾಧನಾ ನೆಲೆಯಲ್ಲಿ ನೋಡುತ್ತಿದ್ದೇವೆ. ಹೀಗಾಗಿ ನಾವು ಅವರ ಪ್ರಸ್ತುತತೆ ಉಳ್ಳ ಆಚಾರಗಳನ್ನು ಶಿಕ್ಷಣದ ಸರಕನ್ನಾಗಿಯೋ ಶೋರೂಮಿನ ಗತವೈಭವ ಆಗಿಯೋ ನೋಡುತ್ತ ಬಾಳದೆ ಹೋಗುತ್ತಿದ್ದೇವೆ.

ಹನ್ನೆರಡನೆ ಶತಮಾನದಲ್ಲಿ ಅದಾಗಲೇ ಇದ್ದ ವಿವಾಹ, ಕುಟುಂಬ, ಜಾತಿ, ಮಠ

ಇತ್ಯಾದಿ ಸಾಮಾಜಿಕ ಸಂಸ್ಥೆಗಳನ್ನೆಲ್ಲ ಬದಲಿಸಿ ಪರ್ಯಾಯ ಸಾಮಾಜಿಕ ವ್ಯವಸ್ಥೆಯನ್ನು ರೂಪಿಸಲು ಶರಣರು ಹೆಣಗಿದರು. ಆದರೆ ಅಂತಹ ಪರ್ಯಾಯ ಸಮಾಜವ್ಯವಸ್ಥೆಯನ್ನು ಕಟ್ಟುವ ಚಳುವಳಿಯ ಆಶಯಗಳನ್ನೆ ಬುಡಮೇಲು ಮಾಡುವಂತೆ ಕಾಲಾನಂತರದಲ್ಲಿ ಶಿವಭಕ್ತರು ಅದದೇ ಸಂಸ್ಥೆಗಳಿಗೆ ಹೋಗಿ ಬಿದ್ದರು. ಹಳೆಯ ಸಂಸ್ಥೆಗಳ ಅನುಕರಣೆಯಿಂದ ಕಾಪಿಡಲು; ಹೊಸ ಹೊಸ ಕರ್ಮಠ ಆಚರಣೆಗಳನ್ನು ಆ ಸಂಸ್ಥೆಗಳಲ್ಲೆ ಜಾರಿಗೆ ತಂದರು. ಇದರಿಂದಾಗಿ ಶರಣ ಚಳವಳಿ ಕೇವಲ ಅಭ್ಯಾಸಯೋಗ್ಯ ಚರಿತ್ರೆ ಆಗಿ ಅಥವಾ ಮೆಲುಕು ಹಾಕುವ ಗತವೈಭವ ಆಗಿ ಉಳಿಯಿತು. ಅಲ್ಲಲ್ಲಿ ಪಂಚಗಣಾಧೀಶರು, ಮಂಟೇಸ್ವಾಮಿ, ಮಲೆಮಹದೇಶ್ವರ ಇಂತಹ ತಳಸಮುದಾಯದ ಜನ ಶರಣರ ಜಡತ್ವಕ್ಕೆ ಹೊಡೆತ ಕೊಟ್ಟರಾದರೂ ಆನಂತರದಲ್ಲಿ ನಮ್ಮವರು ಅವರನ್ನೂ ಮಠೀಯರನ್ನಾಗಿಯೂ ದೇವರುಗಳನ್ನಾಗಿಯೂ ಮಾಡಿ ಪುರಾಣೀಕರಿಸಿಟ್ಟರು. ಹಲವು ತತ್ವಪದಕಾರರು ಶರಣ ಚಳವಳಿಯಿಂದ ಪ್ರೇರಿತರಾಗಿ ಅಂದಿನಿಂದ ಇಂದಿನವರೆಗೂ ಸಮತೆಯನ್ನು ನಿರಂತರ ಕಟ್ಟುತ್ತ ಜಡತ್ವವನ್ನು ಮುರಿಯುತ್ತ ಇರುವುದು ಸ್ವಲ್ಪ ಸಮಾಧಾನದ ಸಂಗತಿ. ಹಳತು ಮುರಿದುಕೊಂಡು ಹೊಸ ಕಾಲಕ್ಕೆ ಬೇಕಾದಂತೆ ಆಚಾರಗಳು ರೂಪಾಂತರ ಆಗದೆ ಜಡ ಆಚರಣೆಗಳಾಗಿ ಹೇರಲ್ಪಟ್ಟರೆ ಅವುಗಳಿಂದ ಯಾವ ಪ್ರಯೋಜನವೂ ಇಲ್ಲ ಅಲ್ಲವೆ?

ಇಲ್ಲಿನ ನಾಲ್ಕು ಮತ್ತು ಆರನೇ ಪ್ರಶ್ನೆಗಳನ್ನು ಒಟ್ಟಿಗೇ ನೋಡುವುದು ಒಳ್ಳೆಯದು. ದಲಿತರು ಮತ್ತು ಮಹಿಳೆಯರ ವಿಚಾರದಲ್ಲಿ ಶರಣ ಚಳವಳಿ ನಿಜಕ್ಕೂ ಕ್ರಾಂತಿಕಾರಕವಾಗಿ ವರ್ತಿಸಿತು. ಸಾಮಾಜಿಕ ನ್ಯಾಯ ಮತ್ತು ಲಿಂಗನ್ಯಾಯದ ಎರಡೂ ಪ್ರಶ್ನೆಗಳನ್ನು ಶರಣ ಚಳವಳಿ ಬಹಳ ಗಂಭೀರವಾಗಿ ತೆಗೆದುಕೊಂಡಿತ್ತು. ಹಾಗಾಗಿ ಮುವ್ವತ್ತಕ್ಕೂ ಹೆಚ್ಚು ಜನ ಮಹಿಳೆಯರು ಆ ಕಾಲದಲ್ಲಿ ವಚನಗಳನ್ನು ರಚಿಸಿದರು. ಅವರಲ್ಲಿ ಬಹಳಷ್ಟು ಮಹಿಳೆಯರು ಪುಣ್ಯಸ್ತ್ರೀಯರಾಗಿದ್ದರು ಎಂಬುದನ್ನು ನಾವು ಮರೆಯುವಂತಿಲ್ಲ. ಹಲವು ಕಾಯಕಗಳಲ್ಲಿ ವೇಶ್ಯಾವೃತ್ತಿಯನ್ನು ಒಂದು ಕಾಯಕವೆಂದು ಶರಣರ ಚಳವಳಿ ಗೌರವಿಸಿತ್ತು. ತಾಯ್ತನ, ಬಹುಪತ್ನಿತ್ವ, ವಿವಾಹ, ಕುಟುಂಬ ಈ ಯಾವುವನ್ನೂ ಶರಣ ಚಳವಳಿ ವಿರೋಧಿಸಿಲ್ಲ. (ಅಕ್ಕನಂತಹ ಒಬ್ಬಿಬ್ಬರು ಇವನ್ನೆಲ್ಲ ನಿರಾಕರಿಸಿದ್ದಾರೆ. ಇದರ ಸಮರ್ಥನೆಗೆ ನೋಡಿ: ಸ.ವ.ಸಂ. ೫-೪೧೪, ೪೧೬, ೪೨೭) ಆದರೆ ನಿಸ್ಸಂಶಯವಾಗಿ ಇಂದಿನ ದಲಿತ ಸಂಕಥನಕ್ಕೆ ಮತ್ತು ಮಹಿಳಾ ಸಂಕಥನಕ್ಕೆ ಶರಣ ಚಳವಳಿ ತನ್ನದೇ ಕೊಡುಗೆಗಳನ್ನು ನೀಡಿದೆ. ದಲಿತ ಎನ್ನುವುದು ಒಂದು ನಿರ್ದಿಷ್ಟ ಜಾತಿ ಗುರುತು ಮಾತ್ರವಲ್ಲ. ಎಲ್ಲ ಶೋಷಿತರೂ-ದೀನರೂ ದಲಿತರೇ. ಈ ದೃಷ್ಟಿಯಿಂದ ಶರಣ ಚಳವಳಿ ತಳಸಮುದಾಯದವರ ಚಳವಳಿ. ಬಸವಣ್ಣ ಕೂಡ ತಳಸಮುದಾಯದವನೇ. ಹರಿಹರ ಅವನನ್ನು ಬ್ರಾಹ್ಮಣರಿಗೆ ಹುಟ್ಟಿದವನು ಎಂದು ಹೇಳಿದ ಮಾತ್ರಕ್ಕೆ ನಾವು ಅವನನ್ನು ಬ್ರಾಹ್ಮಣರಿಗೆ ಹುಟ್ಟಿದವನು ಎಂದು ನಂಬಬೇಕಾಗಿಲ್ಲ. ಅವನು ನಂದಿಯ ಅವತಾರ ಎಂದು ಯಾರೋ ಒಬ್ಬ ಕವಿ ಹೇಳಿದ ಎಂದ ಮಾತ್ರಕ್ಕೆ ನಾವದನ್ನು ನಂಬಬೇಕಿಲ್ಲ.

ಶರಣ ಚಳವಳಿಯಲ್ಲಿ ಪಾಲ್ಗೊಂಡ ಸಹಸ್ರಾರು ಜನರಲ್ಲಿ (ಶರಣಲೀಲಾಮೃತ, ಭೈರವೇಶ್ವರ ಕಾವ್ಯ ಕಥಾಮಣಿಸೂತ್ರ ರತ್ನಾಕರ್ರ ಮೊದಲಾದ ಕಡೆ ಹಲವು ಶರಣರ ಉಲ್ಲೇಖಗಳಿವೆ.) ಕಿನ್ನರಿ ಬೊಮ್ಮಯ್ಯ, ಡೋಹರ ಕಕ್ಕಯ್ಯ, ಧೂಳಯ್ಯ, ಕೇತಯ್ಯ, ದಾಸಿಮಯ್ಯ, ಅಲ್ಲಮ, ಅಕ್ಕ ಮಾರಯ್ಯ, ಲಕ್ಕಮ್ಮ, ಮುಕ್ತಾಯಕ್ಕ, ರೆಮ್ಮವ್ವೆ, ಉರಿಲಿಂಗಪೆದ್ದಿ, ಕಾಳವ್ವೆ, ಸಂಕವ್ವೆ, ನಿಂಗಮ್ಮ ಹೀಗೆ ಅಸಂಖ್ಯ ದಲಿತರನ್ನೂ, ಮಹಿಳೆಯರನ್ನೂ ಹೋರಾಟಕ್ಕೆ ಶರಣ ಚಳವಳಿ



ಒಳಗೊಂಡಿತ್ತು. ಕಳ್ಳತನದ ವೃತ್ತಿ ಮಾಡುತ್ತಿದ್ದ ಉರಿಲಿಂಗಪೆದ್ದಿ ಆ ಕಾಲಕ್ಕೆ ಉರಿಲಿಂಗದೇವನ ಶಿಷ್ಯನಾಗಿ ಮಹಾಪಂಡಿತನಾಗಿ ಬೆಳೆದ. ಅಸ್ಪೃಶ್ಯರ ಮಾದಿಗ ಕುಲಕ್ಕೆ ಸೇರಿದ ಈತ ಮಠಾಧೀಶ ಕೂಡ ಆದವನು. ಇವನು ಒಂದು ಉದಾಹರಣೆ ಮಾತ್ರ, ಇಂತಹವರ ಪರಂಪರೆಯೇ ಹಿಂದೆಯೂ ಆನಂತರವೂ ಇದ್ದುದ್ದಕ್ಕೆ ಚರಿತ್ರೆಯಲ್ಲಿ ದಾಖಲೆಗಳಿವೆ.

ಹರಳಯ್ಯ ಮದುವರಸರ ಮಕ್ಕಳ ಅಂತರ್ಜಾತಿ ವಿವಾಹ ಕೂಡ ದಲಿತ ಸಂಕಥನಕ್ಕೆ ಶರಣ ಚಳವಳಿ ನೀಡಿದ ಒಂದು ಬಹು ದೊಡ್ಡ ಕೊಡುಗೆ. ಅಲ್ಲದೆ ಆಹಾರದ ವಿಚಾರದಲ್ಲಿ ಅನೇಕ ವಿಧಿ ನಿಷೇಧಗಳು ಅಂದಿಗೆ ಚಾಲ್ತಿಯಲ್ಲಿದ್ದ ಮತ್ತು ಇಂದಿಗೂ ಚಾಲ್ತಿಯಲ್ಲಿ ಇರುವ ಸಮಾಜ ನಮ್ಮದು. ಯಾರೋ ದನದ ಮಾಂಸ ತೆಗೆದುಕೊಂಡು ಹೋಗುತ್ತಿದ್ದಾರೆ ಎಂದರೆ ಅವರನ್ನು ಮಾಬ್ ಲಿಂಚ್ (ಗುಂಪು ಹಲ್ಲೆ) ಮಾಡಿ ಕೊಲ್ಲುವ ಸಮಾಜ ನಮ್ಮದು. ಯಾರು ಏನು ತಿನ್ನಬೇಕು ತಿನ್ನಬಾರದು ಎಂಬುದಕ್ಕೆ ನಮ್ಮಲ್ಲಿ ಯಾರು ಯಾರೋ ಫರ್ಮಾನು ಹೊರಡಿಸುತ್ತಾರೆ. ಹಿಂಸೆ ಅಹಿಂಸೆಗಳ ಹೆಸರಿನಲ್ಲಿ ನಡೆಯುವ ಆಹಾರ ರಾಜಕಾರಣ ಜಾತಿರಾಜಕಾರಣದ ಮತ್ತು ಮತರಾಜಕಾರಣದ ಇನ್ನೊಂದೆ ಮುಖವಾಗಿದೆ. ಆದರೆ ಆ ಕಾಲಕ್ಕೆ ಅಂತರಜಾತಿ ವಿವಾಹ ಮಾತ್ರವಲ್ಲ; ಅಂತರಜಾತಿ ಸಹಭೋಜನ ಕೂಡ ಚಾಲ್ತಿಗೆ ತಂದವರು ಶರಣರು. ಕಕ್ಕಯ್ಯನ ಮನೆಯಲ್ಲಿ ಬಸವಣ್ಣ ಉಂಡದ್ದು ಅಂದಿಗೆ ಕ್ರಾಂತಿಯೇ.

'ಕುರಿಕೋಳಿ ಕರಿಮೀನು ತಿಂಬವರಿಗೆಲ್ಲ ಕುಲಜ ಕುಲಜರೆಂದೆಂಬರು, ಶಿವಗೆ ಪಂಚಾಮೃತ ಕರೆವ ಪಶುವ ತಿಂಬ ಮಾದಿಗ ಕೀಳುಜಾತಿ ಎಂಬರು, ಅವರೆಂತು ಕೀಳುಜಾತಿಯಾದರು?' (ಸವಸಂ-೫: ೭೩೩) ಎಂದು ಕಾಳವ್ವೆ ಕೇಳುತ್ತಾಳೆ. (ಚೌಡಯ್ಯನದೂ ಇದೇ ರೀತಿಯ ಒಂದು ವಚನವಿದೆ) 'ಎಲ್ಲರ ಹೆಂಡರು ತೊಳಸಿಕ್ಕುವರು ಎನ್ನ ಗಂಡಂಗೆ ತೊಳಸಿಕ್ಕುವುದಿಲ್ಲ, ಎಲ್ಲರ ಗಂಡಂದಿರು ಮೇಲೆ ಎನ್ನ ಗಂಡ ಕೆಳಗೆ ನಾ ಮೇಲೆ' (ಸವಸಂ-೫: ೭೪೬) ಎಂದು ಕದಿರೆ ರೆಮ್ಮವ್ವೆ ಹೇಳುತ್ತಾಳೆ. ಅಂದರೆ ಆಹಾರ ತಾರತಮ್ಯ, ಲಿಂಗ ತಾರತಮ್ಯ ಮತ್ತು ಜಾತಿ ತಾರತಮ್ಯ ಎಲ್ಲವುಗಳನ್ನೂ ಪ್ರಶ್ನಿಸಿ, ಪ್ರತಿರೋಧಿಸಿ ಪರ್ಯಾಯ ಸಮಾಜವನ್ನು ಕಟ್ಟಲು ಯತ್ನಿಸಿದ ಚಳವಳಿ ಶರಣ ಚಳವಳಿ.

ಯಾರಿಗೆ ವೇದ ಓದಿದರೆ ಕಿವಿಗೆ ಕಾದ ಸೀಸ ಸುರಿಯುವ ಬೆದರಿಕೆ ಇತ್ತೋ ಅಂಥವರು ಸಂಸ್ಕೃತ ಕಲಿತು ವಿದ್ವಾಂಸರಾದದ್ದು ಒಂದು ಬಗೆಯ ಕ್ರಾಂತಿಯಾದರೆ ಯಾರೆಲ್ಲ ಅಕ್ಷರವಂಚಿತರಾಗಿದ್ದರೋ ಅವರು ವಿದ್ಯೆ ಕಲಿತು ಸ್ವತಃ ವಚನ ರಚನೆ ಮಾಡಿದ್ದು; ಜನಭಾಷೆಯನ್ನೆ ದೇವಭಾಷೆಯನ್ನಾಗಿ ಬಳಸಿದ್ದು ಇನ್ನೊಂದು ಬಗೆಯ ಸಾಧನೆ. ಶರಣ ಚಳವಳಿಯಲ್ಲಿ ವಚನ ಬರೆಯದ ಹಲವು ಮಹಿಳೆಯರು ಕೂಡ ಪಾಲ್ಗೊಂಡ ಚಾರಿತ್ರಿಕ ದಾಖಲೆಗಳಿವೆ. ಗಂಡನಿಗೆ ಕಾಯಕ-ದಾಸೋಹಗಳಲ್ಲಿ ಸರಿಸಮನಾಗಿ ನಿಂತು ಕೂಡು ಬಾಳು ಬಾಳಿದ ಮಹಿಳೆಯರಂತೆಯೇ ವಿವಾಹ-ಕುಟುಂಬಗಳನ್ನು ನಿರಾಕರಿಸಿದ ಅಕ್ಕ ಮಹದೇವಿಯಂತಹ ಅನುಭಾವಿಗಳೂ ಶರಣ ಚಳವಳಿಯ ಕೊಡುಗೆಯೇ. ಮಠಾಧೀಶರ ರೀತಿಯಲ್ಲಿ ಮಹಿಳೆಯರು ಮಠಾಧೀಶೆಯರಾಗಿ ಬದುಕಿದ ಚರಿತ್ರೆ ಕೂಡ ಶರಣ ಚಳವಳಿಯ ನಂತರದ್ದೆ. ಹಾಗಾಗಿ ಧಾರ್ಮಿಕ ಅಧಿಕಾರ ಕೇಂದ್ರದ ಚುಕ್ಕಾಣಿ ಹಿಡಿಯಬಲ್ಲ ಸಾಧ್ಯತೆಯನ್ನು ಮಹಿಳೆಗೆ ಒದಗಿಸಿದ್ದು ಕೂಡ ಶರಣ ಚಳವಳಿಯೇ.

ದಲಿತ ಮತ್ತು ಮಹಿಳೆ ಎರಡು ವರ್ಗ ಮಾತ್ರವಲ್ಲ ಎಲ್ಲ ಭಕ್ತರೂ ಶಿವನ ಎದುರು ಒಂದೇ ಸಮಾನ. ಯಾರೂ ಹೆಚ್ಚಲ್ಲ ಯಾರೂ ಕಮ್ಮಿಯಲ್ಲ. ಭಕ್ತಿಗೆ ಲಿಂಗ, ಜಾತಿ, ಸಂಪತ್ತು, ಅಂತಸ್ತು, ಪ್ರದೇಶ, ಭಾಷೆ ಯಾವ ಉಪಾದಿಗಳೂ ಶರಣ ಸಮುದಾಯದಲ್ಲಿ ಇರಲಿಲ್ಲ.

(ಬರಿ ಲಾಂಛನಗಳನ್ನೆ ಮುಂದು ಮಾಡಿ ಆಚಾರವಿಲ್ಲದೆ ಕಳ್ಳಬಾಳು ಬಾಳುತ್ತಿದ್ದ ಸುಳ್ಳು ಶರಣರು ಅಂದಿಗೂ ಇದ್ದರು. ಇಂಥವರು ಎಂದಿಗೂ ಇರುತ್ತಾರೆ.) ಜ್ಞಾನ ಒಂದು ನಿರ್ದಿಷ್ಟ ಜಾತಿಯಲ್ಲಿ ಮಾತ್ರ ಹುಟ್ಟಬಲ್ಲುದು, ನಿರ್ದಿಷ್ಟ ಲಿಂಗ, ಭಾಷೆ, ಪ್ರದೇಶಗಳಲ್ಲಿ ಮಾತ್ರ ಹುಟ್ಟಬಲ್ಲದು ಎಂಬ ಅಜ್ಞಾನ ಚಾಲ್ತಿಯಲ್ಲಿದ್ದ ಕಾಲದಲ್ಲಿ ಜ್ಞಾನಕ್ಕೆ ಜಾತಿ ಭೇದ, ಲಿಂಗಭೇದ, ಪ್ರದೇಶ ಭೇದ, ಭಾಷಾ ಭೇದ ಇಲ್ಲದಂತೆ ಮಾಡಿದ ಚಳವಳಿ ಶರಣ ಚಳವಳಿ.

ಇವತ್ತಿನ ಸ್ತ್ರೀವಾದಿ ಚಿಂತನೆಗಳ ಬೆಳವಣಿಗೆಯ ಹಿನ್ನೆಲೆಯಲ್ಲಿ ನೋಡಿದರೆ; ಇವತ್ತು ನಮಗಿರುವ ಲಿಂಗನ್ಯಾಯದ ಪರಿಕಲ್ಪನೆಯಷ್ಟು ಸ್ಪಷ್ಟವಾದ ಕಲ್ಪನೆ ಶರಣರಲ್ಲಿ ಇರಲಿಲ್ಲ. ಆದರೆ ಮಹಾಮನೆಯಲ್ಲಿ ಸಾರ್ವಜನಿಕವಾಗಿ ತತ್ವಚರ್ಚೆಯಲ್ಲಿ ಹೆಣ್ಣನ್ನು ಒಳಗೊಳ್ಳುವ ಅವಕಾಶ ಅಂದು ಇತ್ತು. ಹೆಣ್ಣುಮಕ್ಕಳಿಗೆ ಅನುಭಾವಿಗಳಾಗುವ, ಓದು-ಬರಹದಲ್ಲಿ ತೊಡಗುವ ಅವಕಾಶ ಇತ್ತು. ಆಧ್ಯಾತ್ಮಿಕವಾಗಿ ಹೆಣ್ಣನ್ನು ಗಂಡಿಗೆ ಸಮವಾಗಿ ಪರಿಗಣಿಸುವ ಸ್ಥಿತಿಯಿತ್ತು. ಯಾರೋ ಮೇಲ್ವರ್ಗದ ಒಬ್ಬಿಬ್ಬರಿಗೆ ಇಂತಹ ಅವಕಾಶ ದೊರೆಯುವುದು ದೊಡ್ಡದಲ್ಲ. ತಳಸಮುದಾಯದ ನಿಂಗಮ್ಮ, ಸಂಕವ್ವೆ, ರೆಮ್ಮವ್ವೆ, ಕಾಳವ್ವೆ, ಲಕ್ಕಮ್ಮ, ದುಗ್ಗಳೆ, ಗೊಗ್ಗವ್ವೆ, ಸತ್ಯಕ್ಕ, ಸೋಮಮ್ಮ, ಅಕ್ಕಮ್ಮ, ಬೊಂತಾದೇವಿ, ಕಾಲಕಣ್ಣಿಯ ಕಾಮಮ್ಮ ಹೀಗೆ ಅನೇಕ ಸ್ತ್ರೀಯರು ಶರಣ ಚಳುವಳಿಯಲ್ಲಿ ಪಾಲ್ಗೊಂಡಿದ್ದಾರೆ.

ಅಲ್ಲಮ 'ಹೆಣ್ಣು ಮಾಯೆಯಲ್ಲ' ಎನ್ನುತ್ತಾನೆ. ಅಂಬಿಗರ ಚೌಡಯ್ಯ, ಜೇಡರ ದಾಸಿಮಯ್ಯ 'ನಡುವೆ ಸುಳಿವಾ ಆತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ' ಎನ್ನುತ್ತಾರೆ. ಬಸವಣ್ಣ ಹೆಣ್ಣುಗಳು ಮಾಡುವ ಕಾಯಕವನ್ನು ಗೌರವದಿಂದ ಕಾಣುತ್ತಾನೆ. ಹೀಗೆ ಸಾಂಪ್ರದಾಯಿಕವಾಗಿ ಹೆಣ್ಣನ್ನು ನೋಡದೆ ಸಮಾನವಾಗಿ ಒಳಗೊಳ್ಳುವ ದೃಷ್ಟಿ ಶರಣರಲ್ಲಿ ಇದೆ. ಮಹಿಳೆಯರೊಂದಿಗೆ ಎಲ್ಲ ಬಗೆಯ ಸಂವಾದ ಸಾಧ್ಯವಿತ್ತು ಎಂಬುದು ಶೂನ್ಯಸಂಪಾದನೆಗಳನ್ನು ನೋಡಿದರೂ ತಿಳಿಯುತ್ತದೆ.

ಕಾಲಕಣ್ಣಿಯ ಕಾಮಮ್ಮ ಬುಟ್ಟಿ ಹೆಣೆಯುವ ಕಾಯಕದವಳು, ಕದಿರೆ ರೆಮ್ಮವ್ವೆ ನೂಲುವ ಕಾಯಕದವಳು, ರೇಕಮ್ಮ ಹೂವು ಕಟ್ಟುವವಳು, ಸಂಕವ್ವ ವೇಶ್ಯಾವೃತ್ತಿಯವಳು, ಲಕ್ಕಮ್ಮ ಅಕ್ಕಿ ಒಪ್ಪ ಮಾಡುವ ಕಾಯಕದವಳು, ಸತ್ಯಕ್ಕ ಕಸಗುಡಿಸುವ ಕಾಯಕದವಳು, ಕಾಳವ್ವೆ ಮರಗೆಲಸ ಮಾಡುವವಳು, ಮೋಳಿಗೆ ಮಹದೇವಿ ಕಟ್ಟಿಗೆ ತಂದು ಮಾರುವ ಕಾಯಕದವಳು, ಹೀಗೆ ಶರಣ ಚಳವಳಿಯಲ್ಲಿ ಪಾಲ್ಗೊಂಡ ಬಹುಪಾಲು ಎಲ್ಲ ಸ್ತ್ರೀಯರೂ ಕಾಯಕಜೀವಿಗಳೇ. ಇವರ ವಚನಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಇವರೆಲ್ಲರಿಗೂ ಆರ್ಥಿಕ ಸ್ವಾವಲಂಬನೆ ಇತ್ತು ಎಂಬ ಸುಳಿವುಗಳು ಸಿಗುತ್ತವೆ. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬಂತೆಯೇ ಶರಣರು-ಶರಣೆಯರು 'ಅರ್ಥ ಪ್ರಾಣ ಅಭಿಮಾನಗಳೆಲ್ಲವನ್ನೂ ಗುರುಲಿಂಗ ಜಂಗಮಕ್ಕೆ' ಅರ್ಪಿಸುವವರು. (ನೋಡಿ. ಸವಸಂ ೫: ೫೫೩, ೫೫೮) ಇವರ ಆರ್ಥಿಕ ಸ್ವಾವಲಂಬನೆ ಎಂಬುದು ಸಮುದಾಯ ಸ್ವಾವಲಂಬನೆಗೆ ಅಧೀನವಾದದ್ದು. ಕಾಯಕ ಜೀವಿಗಳು ದುಡಿಯುವುದು ತಮ್ಮ ತಮ್ಮ ಕೌಟುಂಬಿಕ ಆಸ್ತಿಗಾಗಿ ಅಲ್ಲ. ಶರಣ ಸಮುದಾಯದ ಹಿತಕ್ಕಾಗಿ. ತಮ್ಮ ಕಾಯಕದ ಆದಾಯ ಕುಟುಂಬದ ಯಜಮಾನನ ಒಡೆತನದಲ್ಲಿರುವ ಸಂಪತ್ತಲ್ಲ. ದುಡಿಮೆಯ ಹೆಚ್ಚುವರಿ ಉತ್ಪನ್ನ ಅಥವಾ ಆದಾಯ ವಂಶಪಾರಂಪರ್ಯವಾಗಿ ದಾಟಿ ಬರುವ ಆಸ್ತಿಯೂ ಅಲ್ಲ. ಅದು ದಾಸೋಹಕ್ಕೆ ಬಳಕೆಯಾಗಬೇಕಾದ ದುಡಿಮೆ. ಆದರೆ ಆನಂತರದಲ್ಲಿ ವೀರಶೈವ ಲಿಂಗಾಯತ ಮಠೀಯತೆ ಇದನ್ನೆಲ್ಲ ಗಾಳಿಗೆ ತೂರಿ ವಂಶಪಾರಂಪರ್ಯ ಆಸ್ತಿ ಮತ್ತು ಸಂಪತ್ತಿನ ಒಡೆತನವನ್ನು ಜಾರಿಯಲ್ಲಿಟ್ಟಿದೆ. ಜಾತಿಯ ಆಸ್ತಿಯನ್ನಾಗಿ ಮಠವ್ಯವಸ್ಥೆಯನ್ನು ಮಾಡಿಟ್ಟಿದೆ.



ಇನ್ನು ವಚನಕಾರ್ತಿಯರ ಹೋರಾಟಕ್ಕೆ ಪ್ರತ್ಯೇಕವಾದ ಅಸ್ತಿತ್ವ ಇದೆಯೇ? ಎಂಬ ಪ್ರಶ್ನೆ. ಶರಣಸತಿ ಲಿಂಗಪತಿ ಎಂಬ ಭಕ್ತಿಭಾವದಲ್ಲಿ ಬಹುತೇಕ ವಚನಕಾರ್ತಿಯರು ನಂಬಿಕೆ ಉಳ್ಳವರು. ಅಕ್ಕನಿಗೂ ಈ ಬಗ್ಗೆ ನಂಬುಗೆ ಇದೆ. ಆದರೆ ಇದು ಹೆಣ್ಣು-ಗಂಡಿನ ಅಧೀನತೆಯನ್ನು ಒಪ್ಪಿದ ಸ್ಥಿತಿ ಅಲ್ಲ. ಮಹದೇವಿಯಕ್ಕ, ಅಕ್ಕಮ್ಮ, ರೆಮ್ಮವ್ವೆ, ಲಕ್ಕಮ್ಮ, ಸಂಕವ್ವೆ ಹೀಗೆ ಕೆಲವೇ ಕೆಲವು ವಚನಕಾರ್ತಿಯರಲ್ಲಿ ಗಂಡ-ಹೆಂಡತಿ ಸಂಬಂಧದ ಆಚೆಗೂ ಹೆಣ್ಣು ಸ್ವತಂತ್ರವಾಗಿ ಯೋಚಿಸುವ ಸುಳಿವುಗಳಿವೆ. 'ಲೋಕದ ಗಂಡರನ್ನು ಒಯ್ದು ಒಲೆಯೊಳಗಿಕ್ಕು' ಎಂದು ಖಡಾಖಂಡಿತವಾಗಿ ಹೇಳುವ ಅಕ್ಕ ಖಂಡಿತವಾಗಿಯೂ ಒಬ್ಬ ಕ್ರಾಂತಿಕಾರಿ ಹೋರಾಟಗಾರ್ತಿ. ಒಬ್ಬಿಬ್ಬರು ದೇಹಮೂಲ ಕಾಯಕ ಮಾಡುವ ಮಹಿಳೆಯರನ್ನು ಹೊರತುಪಡಿಸಿದರೆ ಪುಣ್ಯಸ್ತ್ರೀಯರನ್ನೂ ಒಳಗೊಂಡಂತೆ ಹಲವು ಸ್ತ್ರೀಯರು ತಮ್ಮ ಗಂಡಂದಿರ ಹೆಸರಿನ ಮೂಲಕವೇ ಅಂಕಿತಗಳನ್ನು ಇರಿಸಿಕೊಂಡಿದ್ದಾರೆ. ಇಲ್ಲಿ ಹೇಗೆ ಎಲ್ಲ ವಚನಕಾರರನ್ನು ಒಂದೇ ಬುಟ್ಟಿಯಲ್ಲಿ ಹಾಕಲು ಆಗುವುದಿಲ್ಲವೋ ಹಾಗೇ ಎಲ್ಲ ವಚನಕಾರ್ತಿಯರನ್ನೂ ಒಂದೇ ವಿಚಾರದ ಬುಟ್ಟಿಯಲ್ಲಿ ಹಾಕಲು ಆಗುವುದಿಲ್ಲ. ಶರಣ ಚಳವಳಿಯ ಎಲ್ಲ ಪಾಲುದಾರರ ಚಿಂತನೆಗಳು ಎಕರೂಪಿ ಅಲ್ಲ. ಆದರೆ ಎಲ್ಲ ವಚನಕಾರರಿಗು ಅವರದೆ ಅನನ್ಯತೆ ಇರುವಂತೆ ಮಹಿಳೆಯರ ಸಮುದಾಯದಲ್ಲು ಅವರದೇ ಅನನ್ಯತೆಗಳನ್ನು ಗುರುತಿಸಿಕೊಳ್ಳಲು ಸಾಧ್ಯವಿದೆ.

ಕೊನೆಯದಾಗಿ ಸಹಿಷ್ಣುತೆಯನ್ನು ಶರಣ ಚಳವಳಿಯ ಆಶಯ ಎಂದು ಹೇಳಲು ಸಾಧ್ಯವಿದೆಯೋ? ಎಂದರೆ ಇದು ಸಹಿಷ್ಣುತೆ ಎಂದರೆ ಯಾವ ಬಗೆಯ ಸಹಿಷ್ಣುತೆ? ಯಾರೊಂದಿಗಿನ ಸಹಿಷ್ಣುತೆ? ಎಂಬ ಎರಡು ಮುಖದ ಪ್ರಶ್ನೆಗೆ ದಾರಿ ಮಾಡಿಕೊಡುತ್ತದೆ. ವೈಷ್ಣವ-ವೈದಿಕ, ಆಚಾರ-ವಿಚಾರಗಳ ಬಗ್ಗೆ ತೀವ್ರವಾದ ವಿರೋಧ ಮತ್ತು ಸಂಘರ್ಷದಿಂದಲೇ ಶರಣ ಚಳವಳಿ ಹುಟ್ಟಿ ಬೆಳೆದದ್ದು. ಹಾಗಾಗಿ ಇದಕ್ಕೆ ಆ ಬಗ್ಗೆ ವೀರವಿರೋಧ ಇದೆ. ಸಹಿಷ್ಣುತೆ ಇಲ್ಲ. (ಈ ನೆಲೆಯಲ್ಲಿ ಶೈವ ವೈಷ್ಣವ ಸಂಘರ್ಷದ ಚರಿತ್ರೆಯಾಗಿ ಶರಣ ಚಳವಳಿಯನ್ನು ನಾವು ನೋಡಬಹುದಾಗಿದೆ.) ಇದು ವೈದಿಕ ಆಚಾರ ವಿಚಾರ ಎರಡರ ಜೊತೆಗಿನ ಸಂಘರ್ಷವೂ ತಳಸಮುದಾಯವನ್ನು ಸಮಾನ ಪಾತಳಿಗೆ ತರಬೇಕೆನ್ನುವ ಹೋರಾಟವೂ ಆಗಿತ್ತು. ಈ ದೃಷ್ಟಿಯಿಂದ ತಳಸಮುದಾಯಗಳನ್ನು ಒಳಗೊಂಡು ಬಾಳು ನಡೆಸುವ ವಿಚಾರದಲ್ಲಿ; ತಳಸಮುದಾಯಗಳನ್ನು ಒಳಗೊಂಡು ಶರಣ ಸಮುದಾಯ ಕಟ್ಟುವ ವಿಚಾರದಲ್ಲಿ ಇದೊಂದು ಸಹಿಷ್ಣುತೆ ಇದ್ದ ಚಳವಳಿ. ಆದರೆ ಜಾತಿ ಲಿಂಗ ಪಂಥ ಆಚಾರ ವಿಚಾರ ಆಹಾರ ಕಾಯಕ ಮೊದಲಾದವುಗಳ ಬಗೆಗೆ ಇದ್ದ ಅಸಮಾನತೆ 'ಕೀಳುತನ'ದ ವಿರುದ್ಧ ಹೋರಾಟ ಕಟ್ಟುವ ನೆಲೆಯಲ್ಲಿ ಇದು ಜಡ ಪುರೋಹಿತಶಾಹಿ ಮತ್ತು ಊಳಿಗಮಾನ್ಯ ಗೌಡಿಕೆ ಪಟೇಲಿಕೆಗಳ ವಿರುದ್ಧ ಅಸಹಿಷ್ಣುತೆ ಇದ್ದ ಚಳವಳಿ. ಶರಣಚಳವಳಿ ಎಲ್ಲ 'ಕೆಳ'ಜಾತಿಯ ಜನವರ್ಗವನ್ನು ಒಳಗೊಂಡು ಬೆಳೆದಿರುವ ಕಾರಣಕ್ಕೆ ಇದೊಂದು ಶರಣ ಸಮುದಾಯಗಳಲ್ಲಿನ ಎಲ್ಲ ಭಿನ್ನ ಭೇದಗಳನ್ನು ತೊಡೆಯುವ ವಿಚಾರದಲ್ಲು ಅಸಹಿಷ್ಣುತೆ ಮತ್ತು ಪ್ರತಿರೋಧ ಇದ್ದ ಚಳವಳಿ. 'ಭಿನ್ನ ಭೇದವ ಮಾಡಬ್ಯಾಡಿರಿ' ಎಂಬುದೇ ಇದರ ಹಕ್ಕೊತ್ತಾಯ.

**ಆಕರ: ಸವಸಂ- ಸಮಗ್ರ ವಚನ ಸಂಪುಟಗಳು-ಸಂ. ಎಂ.ಎಂ.ಕಲಬುರ್ಗಿ ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಣೆ.**

●

*ನಂ. ೩೯, ೨ನೆ ಮುಖ್ಯರಸ್ತೆ, ೧೦ನೆ ಅಡ್ಡರಸ್ತೆ, ಉಲ್ಲಾಳ ಮುಖ್ಯರಸ್ತೆ, ಜ್ಞಾನಜ್ಯೋತಿ ನಗರ*
*ಬೆಂಗಳೂರು - ೫೬೦ ೦೫೬ ೯೪೪೯೨ ೭೧೧೫೬*

# ವಚನ-ವೈಚಾರಿಕತೆ-ವೈಜ್ಞಾನಿಕ ಮನೋಭಾವ

**ಶ್ರೀಮತಿ ಸುಮಂಗಲಾ ಎಸ್. ಮುಮ್ಮಿಗಟ್ಟಿ**

ಶರಣರ ವೈಚಾರಿಕತೆಯ ವೈಶಾಲ್ಯತೆಯನ್ನು ೨೧ನೆಯ ಶತಮಾನದಲ್ಲಿ ಕೂಡಾ ಸಾಧಿಸುವುದು ನಮಗೆ ಸಾಧ್ಯವಾಗಿಲ್ಲ. ಇಂದಿಗೂ ನಾವು ದಿನ ಬೆಳಗಾದರೆ ವಾರ, ದಿನ, ತಿಥಿ, ನಕ್ಷತ್ರಗಳನ್ನು ನೋಡುವವರನ್ನೂ, ದಿನದ ಯಾವುದೋ ಸಮಯ ಶುಭ ಅಶುಭ ಎನ್ನುವವರನ್ನು ಕಾಣುತ್ತೇವೆ. ಇನ್ನು ೯೦೦ ವರ್ಷಗಳ ಹಿಂದೆ ಇದರ ಆಚರಣೆಯಲ್ಲಿನ ನಂಬಿಕೆ ಇನ್ನೂ ಹೆಚ್ಚಾಗಿರಬೇಕು ಆದ್ದರಿಂದ ವಚನಗಳಲ್ಲಿ ಇದನ್ನು ವಿರೋಧಿಸುವುದನ್ನು ನಾವು ಕಾಣುತ್ತೇವೆ. ಅಂಥಹ ಕೆಲವು ವಿಚಾರಗಳನ್ನು ನಾವಿಂದು ಚರ್ಚಿಸೋಣ.

**ಅಂದು ಇಂದು ಮತ್ತೊಂದೆನಬೇಡ,**
**ದಿನವಿಂದೇಶಿವ "ಶರಣೆಂ" ಬವಂಗೆ,**
**ದಿನವಿಂದೇಹರ "ಶರಣೆಂ" ಬವಂಗೆ,**
**ದಿನವಿಂದೇ ನಮ್ಮ ಕೂಡಲಸಂಗನ ಮಾಣದೆನೆನೆವಂಗೆ.**

ನಮಗೆಲ್ಲ ಗೊತ್ತಿರುವಂತೆ ಭೂಮಿ ಸೂರ್ಯನನ್ನು ಸುತ್ತುವುದರ ಜೊತೆ ಜೊತೆಗೇ ತನ್ನ ಸ್ವಲ್ಪವೇ ಓರೆಯಾಗಿರುವ ತನ್ನ ಅಕ್ಷದ (ಇಪ್ಪತ್ಮೂರುವರೆ ಡಿಗ್ರಿ) ಮೇಲೆ ತಾನೂ ಸುತ್ತುತ್ತಿದೆ. ಹೀಗೆ ಅದು ಒಂದು ದೀರ್ಘ ವೃತ್ತಾಕಾರದ ಕಕ್ಷೆಯಲ್ಲಿ ಚಲಿಸುವಾಗ ಒಮ್ಮೆ ಸೂರ್ಯನಿಗೆ ಹತ್ತಿರವೂ ಮತ್ತೊಮ್ಮೆ ದೂರವೂ ಇರುವುದರಿಂದ, ಋತುಮಾನಗಳು ಆಗುತ್ತಿವೆ. ಭೂಮಿಯ ಈ ಚಲನೆಯನ್ನು ಪರಿಭ್ರಮಣ ಎನ್ನುತ್ತೇವೆ. ಹಾಗೆಯೇ ಭೂಮಿ ಇಪ್ಪತ್ನಾಲ್ಕು ಗಂಟೆಗಳಲ್ಲಿ ತನ್ನ ಅಕ್ಷದ ಮೇಲೆ ಭ್ರಮಿಸುವುದರಿಂದ ಸೂರ್ಯನಿಗೆ ಅಭಿಮುಖವಾಗಿರುವ ಭಾಗದಲ್ಲಿ ಹಗಲೂ ಮತ್ತೊಂದು ಕಡೆ ರಾತ್ರಿಯೂ ಆಗುತ್ತದೆ. ಹೀಗೆಯೇ ಆಕಾಶ ಕಾಯಗಳ ಚಲನೆಯಿಂದ ಗ್ರಹಣಗಳೂ ಆಗುತ್ತಿವೆ. ಇವೆಲ್ಲವುಗಳಿಗೆ ನಮಗೆ ವೈಜ್ಞಾನಿಕ ಕಾರಣಗಳು ಗೊತ್ತಿವೆ.

ಇವುಗಳು ಸಂಭವಿಸುವ ದಿನಗಳನ್ನು ನಾವಿಂದು ನಿಖರವಾಗಿ ಹೇಳಬಲ್ಲವರಾಗಿದ್ದೇವೆ. ಹೀಗಿದ್ದಾಗ ಯಾವುದೇ ಒಂದು ದಿನ ಶುಭವೂ ಅಥವಾ ಅಶುಭವೂ ಆಗುವುದು ಹೇಗೆ ಸಾಧ್ಯ. ಆದುದರಿಂದಲೇ ಬಸವಣ್ಣನವರು ನಿತ್ಯ ದೇವರನ್ನು ನೆನೆವರಿಗೆ ಪ್ರತಿದಿನವೂ ಶುಭಕರವೇ ಎನ್ನುತ್ತಾರೆ. ಆದರೆ ಇಂದು ನಮ್ಮ ಸಮಾಜದಲ್ಲಿ ಪ್ರತಿದಿನ ದೃಶ್ಯವಾಹಿನಿಗಳಲ್ಲಿ ಇಂತಹ ಮೌಢ್ಯಗಳನ್ನು ಜನರ ಮನಸ್ಸಿನಲ್ಲಿ ಬಿತ್ತುವವರನ್ನು ನಾವುನೋಡುತ್ತೇವೆ. ಆ ದಿನ ಆ ಕಾರ್ಯವನ್ನು ಮಾಡುವುದು ಅನಿವಾರ್ಯವಾಗಿದ್ದಲ್ಲಿ ಅದಕ್ಕೆ ಪರಿಹಾರವನ್ನು ಸಹ ಸೂಚಿಸುತ್ತಾರೆ. ಇದು ಮದುವೆ, ಮುಂಜಿ, ಗೃಹಪ್ರವೇಶ, ನಾಮಕರಣ ಇವುಗಳನ್ನೂ ದಾಟಿ ಶಿಶುವಿನ ಜನನ ಸಮಯದವರೆಗೆ ಹೋಗಿದೆ. ಶುಭ ಎಂದು ಭಾವಿಸುವ ಸಮಯದಲ್ಲಿ ಸಿಸೇರಿಯನ್ ಸೆಕ್ಷನ್ ಮಾಡಿಸುವವರನ್ನು ನಾವು ನೋಡುತ್ತೇವೆ. ಮೌಢ್ಯದ ವಿರುದ್ಧ



ಹೋರಾಡಬೇಕಾದ ವಿಜ್ಞಾನದ ನೆರವನ್ನು ಪಡೆದು ಅದನ್ನು ಆಗು ಮಾಡುವಂತಾಗಿರುವುದು ವಿಪರ್ಯಾಸವೇ ಸರಿ. ಈ ವಿಷಯದ ಬಗ್ಗೆ ಬಸವಣ್ಣನವರ ಸಾಮಾಜಿಕ ಕಳಕಳಿ ಅವರ ಮತ್ತೊಂದು ವಚನದಲ್ಲಿ ಹೀಗೆ ವ್ಯಕ್ತವಾಗಿದೆ.

**ಎಮ್ಮವರು ಬೆಸಗೊಂಡರೆ ಶುಭ ಲಗ್ನವೆನ್ನಿರಯ್ಯಾ,**
**ರಾಶಿಕೂಟ ಋಣ ಸಂಭಂದವುಟೆಂದು ಹೇಳಿರಯ್ಯಾ,**
**ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯಾ,**
**ನಾಳಿನ ದಿನಕಿಂದಿನ ದಿನ ಲೇಸೆಂದು ಹೇಳಿರಯ್ಯಾ,**
**ಕೂಡಲಸಂಗಮದೇವನ ಪೂಜಿಸಿದ ಫಲ ನಿಮ್ಮದಯ್ಯಾ.**

ಈ ವಚನದಲ್ಲಿ ಬಸವಣ್ಣನವರು ಮತ್ತೂ ಒಂದು ಹೆಜ್ಜೆ ಮುಂದೆ ಹೋಗಿ ಜನ್ಮಜಾತಕ ಅಥವಾ ಜನ್ಮಕುಂಡಲಿಯನ್ನು ನೋಡಿ ಲಗ್ನ ನಿಶ್ಚಯಿಸುವವರನ್ನು, ನಕ್ಷತ್ರ, ರಾಶಿ ಎಲ್ಲವನ್ನು ನೋಡುವುದು ಬೇಕಿಲ್ಲ ಎನ್ನುತ್ತಾರೆ. ಇಲ್ಲಿ ಅವರು ಎಮ್ಮವರು ಬೆಸಗೊಂಡರೆ ಎನ್ನುವುದು, ಯಾವುದೇ ಒಂದು ಗುಂಪನ್ನು ಕುರಿತು ಅಲ್ಲ ಬದಲಾಗಿ ಶರಣರು ಅಥವಾ ಯಾರು ಆ ಮುಹೂರ್ತವನ್ನು ಹುಡುಕಲು ಪ್ರಯತ್ನಿಸುತ್ತಿರುವರೂ ಅವರನ್ನು ಕುರಿತಾಗಿ. ನಿಮಗೆ ಸರಿ ಎನ್ನಿಸುವುದಾದಲ್ಲಿ ನಾಳೆ ಎನ್ನುವುದೂ ಬೇಡ ಇಂದೇ ಸರಿ ಎನ್ನಿ ಎನ್ನುವಲ್ಲಿ ಅವರಲ್ಲಿದ್ದ ವೈಚಾರಿಕತೆಯ ಅರಿವಾಗುತ್ತದೆ.

ನೀವು ಪೂಜಿಸಿದ ಫಲವದು ಎಂದು ಹೇಳುವಲ್ಲಿ ಅವರ ಮಾತಿನಲ್ಲಿ ಖಚಿತತೆ ಎದ್ದು ತೋರುತ್ತದೆ. ಈ ವಿಷಯವನ್ನು ಇಂದಿನ ಸಂದರ್ಭದಲ್ಲಿ ನೋಡುವುದಾದರೆ ಮುಹೂರ್ತ, ಲಗ್ನ ಎಲ್ಲವನ್ನೂ ನೋಡಿ ನಿಶ್ಚಯಿಸಿದ ಎಷ್ಟು ಮದುವೆಗಳು ಯಶಸ್ವಿಯಾಗಿವೆ?

ಎಷ್ಟೋ ಸಲ ಮದುವೆಯ ವಿಡಿಯೋಗ್ರಾಫರ್ ಅಥವಾ ಫೋಟೊಗ್ರಾಫರ್‌ಗಾಗಿ ಹಾರ ಬದಲಾಯಿಸುವ, ಮಾಂಗಲ್ಯಧಾರಣೆಯ ಕ್ರಿಯೆಗಳು ಮತ್ತೊಮ್ಮೆ ನಡೆಯುವುದನ್ನು ನೋಡುತ್ತೇವೆ. ಹಾಗಾದರೆ ಇಲ್ಲಿ ಯಾವುದು ಶುಭ ಮುಹೂರ್ತ?

ಇನ್ನು ಯಾವುದೋ ಒಂದು ಸಮುದಾಯಕ್ಕೆ ಒಂದು ದಿನ ಶುಭವಾದರೆ, ಆ ದಿನ ಮತ್ತೊಂದು ಸಮುದಾಯಕ್ಕೆ ಅಶುಭ ಹೇಗಾಗಲು ಸಾಧ್ಯ?

ಆ ದಿನ ನಿಜಕ್ಕೂ ಅಪಾಯಕಾರಿಯಾಗಿದ್ದರೆ ಜಗತ್ತಿನ ಎಲ್ಲ ಮಾನವರಿಗೂ ಅಪಾಯಕಾರಿಯಾಗಬೇಕಿತ್ತು. ದಿನದಿನಕ್ಕೆ ಹೆಚ್ಚುತ್ತಿರುವ ಈ ಮೌಢ್ಯವನ್ನು ಇನ್ನಾದರೂ ನಾವು ತೊಡೆಯಬೇಕಿದೆ.

ಬಸವಣ್ಣನವರು ಈ ವಿಷಯವನ್ನು ಮತ್ತೆ ಮತ್ತೆ ತಮ್ಮ ವಚನಗಳಲ್ಲಿ ಪ್ರಸ್ತಾಪಿಸುವುದನ್ನು ನೋಡಿದಾಗ ಅವರ ಮನಸ್ಸಿನಲ್ಲಿ ಈ ಆಚರಣೆಯ ಬಗ್ಗೆ ಇದ್ದ ಅಸಮಧಾನ ಎದ್ದು ಕಾಣುತ್ತದೆ. ಅವರದೇ ಮತ್ತೊಂದು ವಚನ ಹೀಗಿದೆ.

**ಲಗ್ನವೆಲ್ಲಿಯದೋ, ವಿಘ್ನವೆಲ್ಲಿಯದೋ, ಸಂಗಯ್ಯಾ?**
**ದೋಷವೆಲ್ಲಿಯದೊ, ದುರಿತವೆಲ್ಲಿಯದೊ, ಸಂಗಯ್ಯಾ?**
**ನಿಮ್ಮನೆನೆವಂಗೆಭವಕರ್ಮವೆಲ್ಲಿಯದೊ,**
**ಕೂಡಲಸಂಗಯ್ಯಾ?**

ಮೌಲ್ಯಯುತವಾದ ವೈಯಕ್ತಿಕ ಬದುಕಿಗೆ ಕೊಟ್ಟಷ್ಟೇ ಮಹತ್ವವನ್ನು ಬಸವಣ್ಣನವರು ಸಾಮಾಜಿಕ ವ್ಯವಸ್ಥೆಗೂ ನೀಡಿದ್ದರು. ತಾವೊಬ್ಬರು ಭಕ್ತಿಮಾರ್ಗದಲ್ಲಿ ಸಾಗುವುದು ಮಾತ್ರವಲ್ಲ, ಸಮಾಜದ ಬಗ್ಗೆ ಅವರಿಗೆ ಇದ್ದ ಕಳಕಳಿ ಅನುಕಂಪಗಳು ಅವರನ್ನು ಸದಾ ಸ್ಪಂದಿಸುವಂತೆ

ಮಾಡುತ್ತಿದ್ದವು.

ಅಂದು ವಿಜ್ಞಾನ ಎಂಬೀ ವಿಶೇಷ ಜ್ಞಾನದ ಅರಿವಿರಲಿಲ್ಲವಾದರೂ ಸರಿ ತಪ್ಪುಗಳ ಅರಿವು ಅವರಿಗಿತ್ತು.

ಬಹುಶಃ ಈ ರೀತಿಯ ಅಂಧ ಆಚರಣೆಗಳನ್ನು ಅನುಸರಿಸುವವರನ್ನು ಕಂಡು ಅವರ ಮನಸ್ಸು ನೋಯುತ್ತಿತ್ತು. ಸಾಮಾಜಿಕ ಸುಧಾರಣೆಯ ಅದಮ್ಯ ಆಶಯ, ಸಹ ಮಾನವರನ್ನು ಹಸನಾದ ಬದುಕಿಗೆ ಸಜ್ಜುಗೊಳಿಸುವ ಉತ್ಕಟವಾದ ಹಂಬಲ ನಮಗೆ ಅವರ ವಚನಗಳಲ್ಲಿ ಕಂಡುಬರುತ್ತದೆ. ಮೇಲಿನ ವಚನದಲ್ಲಿ ವಿಘ್ನ, ಲಘ್ನಗಳೆರಡನ್ನು ಅಲ್ಲಗಳೆಯುವ ಬಸವಣ್ಣನವರು ಯಾವುದೇ ದೋಷ ದುರಿತಗಳೂ ಇಲ್ಲ. ಭವ ಕರ್ಮಗಳು ಇಲ್ಲ ಎನ್ನುವಲ್ಲಿ ವ್ಯಕ್ತಿಶುದ್ಧತೆಯನ್ನು ಮೀರಿ ನಿಂತ ಸಾಮಾಜಿಕ ಶುದ್ಧತೆಯ ಒಳದನಿ ಕೇಳಿಬರುತ್ತದೆ. "ಕಲ್ಯಾಣರಾಜ್ಯದ" ಸ್ವಪ್ನಕಲ್ಪನೆಯ ಹಾದಿಯಲ್ಲಿ ಸಾಮಾಜಿಕ ಜವಾಬ್ದಾರಿಯನ್ನು ಬಸವಣ್ಣನವರು ವಹಿಸಿಕೊಂಡದ್ದು ಅವರ ವಚನಗಳಲ್ಲಿ ಧ್ವನಿಸುತ್ತದೆ.

ಬಸಣ್ಣನವರು ಇದನ್ನು ಅತ್ಯಂತ ಪ್ರೀತಿಯಿಂದ ನಿರ್ವಹಿಸಿದರು. ಆದರೆ ಚೆನ್ನಬಸವಣ್ಣನವರ ಈ ವಚನವನ್ನು ನೋಡಿ.

**ಸೋಮವಾರ, ಮಂಗಳವಾರ, ಶಿವರಾತ್ರಿಯೆಂದು ಮಾಡುವ ಭಕ್ತರ**
**ಲಿಂಗಭಕ್ತಂಗೆ ನಾನೆಂತು ಸರಿಯೆಂಬೆನಯ್ಯಾ?**
**ದಿನ ಶ್ರೇಷ್ಠವೋ? ಲಿಂಗ ಶ್ರೇಷ್ಠವೋ?**
**ದಿನ ಶ್ರೇಷ್ಠವೆಂದು ಮಾಡುವ ಪಂಚ ಮಹಾಪಾತಕರ ಮುಖವ ನೋಡಲಾಗದು.**
**ಸೋಮೇಭೌಮೇವ್ಯತೀಪಾತೇಸಂಕ್ರಾಂತಿಶಿವರಾತ್ರಯೋ**
**ಏಕಭುಕ್ತೋಪವಾಸೇನ ನರಕೇ ಕಾಲಮಕ್ಷಯಂ**
**ಇದು ಕಾರಣ ಕೂಡಲ ಚೆನ್ನಸಂಗಯ್ಯಾ**
**ಇಂಥವರ ಮುಖವ ನೋಡಲಾಗದು.**

ಇಲ್ಲಿ ಚೆನ್ನಬಸವಣ್ಣನವರು ಹೇಳಬಯಸುವ ವಿಚಾರವೂ ಅದುವೇ ಆಗಿದ್ದರೂ ಸಹ, ಅವರಲ್ಲಿ ಪೂಜೆಗೆ ದಿನ, ನೋಡುವವರನ್ನು ಕಂಡು ಕೋಪವ್ಯಕ್ತವಾಗುತ್ತದೆ. ಉಪವಾಸ ಜಾಗರಣೆಗಳನ್ನು ವಿರೋಧಿಸುತ್ತಾ ಅಂಥವರ ಮುಖವನ್ನು ಸಹ ನೋಡಲಾಗದು ಎನ್ನುತ್ತಾರೆ.

ಬಲವಾಗಿ ಬೇರೂರಿರುವ ನಂಬಿಕೆಗಳನ್ನು, ಆಚರಣೆಗಳನ್ನು ಹೊಡೆದೋಡಿಸುವುದು ಅಷ್ಟು ಸುಲಭವಲ್ಲ. ಎಷ್ಟು ಹೇಳಿದರೂ ಜನರು ಅವುಗಳನ್ನು ಪಾಲಿಸುವುದನ್ನು ಕಂಡಾಗ ಸಹಜವಾಗಿಯೆ ಸಿಟ್ಟು ಹತಾಶೆಗಳು ಚೆನ್ನಬಸವಣ್ಣನವರನ್ನು ಕಾಡಿರಬಹುದು ಅದಕ್ಕೆಂದೇ ಅವರು ಅಷ್ಟು ಕಟುವಾಗಿ ಅಂಥವರ ಮುಖವ ನೋಡಲಾಗದು ಎನ್ನುತ್ತಾರೆ.

ಶರಣರ ವಚನಗಳು ಕೇವಲ ಮಾತುಗಳಲ್ಲ ಅಥವಾ ಸಾಹಿತ್ಯಿಕವಾಗಿ ಬರೆದ ಕವನಗಳಲ್ಲ, ಬದಲಾಗಿ ಇವು ಅನುಭವದ ಮತ್ತು ಅನುಭಾವದ ನುಡಿಗಳು ಸಮಾಜದ ತಪ್ಪುಗಳನ್ನು ಎತ್ತಿ ತೋರಿಸಿ, ಜನರನ್ನು ಸರಿ ಹಾದಿಗೆ ತಂದು ಅವರ ಬದುಕನ್ನು ಅರ್ಥಪೂರ್ಣವಾಗಿಸುವ ಆರೋಗ್ಯಕರ ಸಮಾಜವನ್ನು ನಿರ್ಮಿಸುವ ಜವಾಬ್ದಾರಿಯನ್ನು ಹೊತ್ತಿದ್ದವು. ಶರಣ ಸಿದ್ಧಾಂತವಾದ "ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ" ಎಂಬ ಧ್ಯೇಯವನ್ನು ಇವು ಸ್ಫುರಿಸುವುದನ್ನು ನಾವು ನೋಡಬಹುದಾಗಿದೆ. ●

*ನಂ. ೩೦೨/೨೫, ಜೇನುಕಲ್ ಪ್ಯಾರಡೈಸ್, ಪೈಪ್‌ಲೈನ್ ರಸ್ತೆ, ಕರ್ನಾಟಕ ಲೇಔಟ್*
*೧ನೇ ಹಂತ, ಬೆಂಗಳೂರು - ೫೬೦ ೦೮೬ ೯೪೮೧೦ ೩೫೯೮೩*



## ಕ್ಷೇತ್ರ, ವಾರ್ತೆಗಳು



ಸವಣೂರು ಘಟಕ: "ವಚನ ದಿನ" ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ಸಾನ್ನಿಧ್ಯ: ಪೂಜ್ಯ ಮ.ನಿ.ಪ್ರ.ಕುಮಾರ ಮಹಾಸ್ವಾಮಿಗಳು, ವೇದಿಕೆಯಲ್ಲಿ: ಮಹೇಶ ಸಾಲಿಮಠ, ಪರಶುರಾಮಹೊಳಿಗೇರ, ಚಿದಾನಂದ ಬಡಿಗೇರ, ಬಿಡಿ ಭಜಂತ್ರಿ, ಸಿ.ಎನ್. ಲಕ್ಕನಗೌಡ್ರ, ಪ್ರವೀಣ ಚರಂತಿಮಠ, ಡಿ.ಎಫ್. ಬಿಂದಲಗಿ, ಸಿ. ಎನ್. ಪಾಟೀಲ್, ವಿದ್ಯಾಧರ ಕುತನಿ, ಸಿ.ವಿ. ಗುತ್ತಲ, ಬಿ.ಎಸ್. ಚಳ್ಳಾಳ



ಹಿರೇಕೆರೂರ ತಾಲೂಕು: "ವಚನ ದಿನ" ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦
ವೇದಿಕೆಯಲ್ಲಿ: ಜಿ.ಆರ್. ಕೆಂಚಕ್ಕನವರ, ಶಾಂಭವಿತಾಯಿ ಕೆರೂಡಿ, ಮಂಗಳಾ ಹಿರೇಮಠ, ಡಾ. ಎಂ.ಎಂ. ಅಕ್ಕಿ




ಬಸವನಗುಡಿ: ಆನ್ಲೈನ್ "ವಚನ ದಿನ" ಕಾರ್ಯಕ್ರಮ ದಿನಾಂಕ: ೨೯.೦೮.೨೦೨೦
೧೮೨ಜನ ವೀಕ್ಷಣೆ ಮಾಡಿದ್ದಾರೆ ೧೬ಜನ ವಚನ ಗಾಯನ, ಚಿತ್ರದಲ್ಲಿ: ಉಷಾಕಿರಣ್, ಗುರುಪ್ರಸಾದ್ ಕುಚ್ಚಂಗಿ, ಪಿ. ವಸಂತರಾಜು, ಡಾ. ಅಶ್ವಿನಿ ಇತರರು



ಚಿಟಗುಪ್ಪ: "ವಚನದಿನ" ಕಾರ್ಯಕ್ರಮ, ದಿನಾಂಕ:೨೯-೦೮-೨೦೨೦
ವೇದಿಕೆಯಲ್ಲಿ: ಸಂಗಮೇಶ ಎನ್ ಜವಾದಿ, ಭೀಮಶೆಟ್ಟಿ ವಡ್ಡನಕೇರ, ರಮೇಶ ಸಲಗರ್, ತಿಪ್ಪಣ್ಣಾ ಶರ್ಮಾ, ರಾಜಶೇಖರ ಉಪ್ಪಿನ, ಮಲ್ಲಶೆಟ್ಟಿ, ಮಾಹಾರುದ್ರಪ್ಪಾ ಅಣದೂರೆ, ರವಿಚಂದ್ರ ಶಿವಪೂಜೆ, ಡಾ.ದಯಾನಂದ ಕಾರಬಾರಿ, ರಾಮದಾಸ್ ಮಂಕಲ್, ರಾಜಕುಮಾರ ಬೆಲೂರೆ



ಆಲೂರು: "ವಚನದಿನ" ಕಾರ್ಯಕ್ರಮ, ಎಂ ಶಶಿಧರ ಸ್ಮರಣಾರ್ಥ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯-೦೮-೨೦೨೦ ವೇದಿಕೆಯಲ್ಲಿ: ಡಾ. ಜಯರಾಜು, ಸುಶೀಲಾ ಸೋಮಶೇಖರ್, ರೇಣುಕಾ ಪ್ರಸಾದ್, ಎಸ್.ಎಸ್. ಶಿವಮೂರ್ತಿ, ಉಮಾ ರವಿಪ್ರಕಾಶ್



ಕಂಪ್ಲಿ: "ವಚನ ದಿನ" ಕಾರ್ಯಕ್ರಮ ಮತ್ತು ಬಿ.ಎಂ. ಬಸವರಾಜ ದತ್ತಿ ಹಾಗೂ ಶ್ರೀಮತಿ ಅಚ್ಚಪ್ಪ ಸೋಮಪ್ಪ ಹಂಪಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೯.೦೮.೨೦೨೦ ವೇದಿಕೆಯಲ್ಲಿ: ಎಂ.ಎಸ್. ಶಶಿಧರ ಶಾಸ್ತ್ರಿಗಳು, ಜಿ. ಪ್ರಕಾಶ್, ಸುಗ್ಗೇನಹಳ್ಳಿ ರಮೇಶ್, ಬಸವರಾಜ ಬಂಡಿ, ಬಸವರಾಜ, ಎಸ್. ರಮೇಶ್, ವಿದ್ಯಾರ್ಥಿಗಳು




ಭಾಲ್ಕಿ: "ವಚನ ದಿನ" ಕಾರ್ಯಕ್ರಮ ಹಾಗೂ ಚಂದ್ರಮ್ಮ ಶಿವಣಕರ ದತ್ತಿ ಮತ್ತು ನಾಗಪ್ಪ ಕಲ್ಬುರ್ಗಿ ದತ್ತಿ ಉಪನ್ಯಾಸ ಕಾರ್ಯಕ್ರಮ ದಿನಾಂಕ: ೨೯.೦೮.೨೦೨೦ ವೇದಿಕೆಯಲ್ಲಿ: ಮಲ್ಲಮ್ಮ ಪಾಟೀಲ, ಗೀತಾ ಪಾಟೀಲ, ಸೋಮನಾಥ ಮುದ್ದ, ಶಂಭುಲಿಂಗ ವಿ. ಕಾಮಣ್ಣ, ವೀರಣ್ಣ ಕುಂಬಾರ



ಹೊಸನಗರ: "ವಚನ ದಿನ" ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ಸಾನ್ನಿಧ್ಯ: ಮಳಲಿಮಠದ ಗುರು ನಾಗಭೂಷಣ ಮಹಾಸ್ವಾಮಿಗಳು, ವೇದಿಕೆಯಲ್ಲಿ: ಹ.ರು. ಗಂಗಾಧರಯ್ಯ, ರೇವಣಪ್ಪ ಗೌಡರು, ಚನ್ನಬಸಪ್ಪಗೌಡರು, ಚಂದ್ರಮೌಳಿ, ಇಂದ್ರಮ್ಮ, ಬಿ.ಎಸ್. ಸುರೇಶ್, ನಂದನ್, ಇಲಿಯಾಸ್

















ಬಾದಾಮಿ: "ವಚನ ದಿನ" ಕಾರ್ಯಕ್ರಮ ಹಾಗೂ ಶರಣೆ ಲಿಂ. ಅಮರವ್ವ ಜಾಬಶೆಟ್ಟಿ ಸ್ಮರಣಾರ್ಥ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦ ವೇದಿಕೆಯಲ್ಲಿ: ಸೌಮ್ಯಾ ಹಿರೇಮಠ ಪಾರಿತೋಷಕ, ಉಮಾದೇವಿ ಪಟ್ಟಣಶೆಟ್ಟಿ ಶಾರದಾ ಮೇಟಿ, ಅಕ್ಕಮಹಾದೇವಿ ಜಾಬಶೆಟ್ಟಿ

Magazine Registration No. RNI 68294/97
"REGISTERED" Postal Registration No. RNP/KA/BGS-167/2018-2020
Licensed to post without Pre Payment, License No. WPP no:- PMG/BG-119/2018-2020
**Posted at Registered News Paper Mailing Center, Bangalore P.S.O. Mysore Road-560 026 on 5th of every Month**
MAHAAMANE Monthly Magazine    Total Pages 68 (Include Cover Pages)    Date of Publication 1 November 2020



ಬೀಳಗಿ: "ವಚನ ದಿನ" ಕಾರ್ಯಕ್ರಮ, ದಿನಾಂಕ: ೨೯.೦೮.೨೦೨೦
ಸಾನ್ನಿಧ್ಯ: ಪೂಜ್ಯ ಶ್ರೀ ಷ.ಬ್ರ ಗುರುಪಾದ ಶಿವಾಚಾರ್ಯರು, ವೇದಿಕೆಯಲ್ಲಿ: ಜ್ಯೋತಿಬಾ ಅವತಾಡೆ, ಗುರುರಾಜ ಲೂತಿ, ಮಸ್ತಾನಸಾಬ ಬಳಬಟ್ಟೆ, ವ್ಹಿ.ಜಿ. ರೇವಡಿಗಾರ, ಡಾ. ರಾಜರಾಜೇಶ್ವರಿ ಶೀಲವಂತ, ಸೋಮಲಿಂಗ, ಬೇಡರ, ಪಾರ್ವತಿ ಶಿವನಾಳ, ಅರಕೇರಿ




ಮುದ್ದೇಬಿಹಾಳ: ಲಿಂ. ಬಸವರಾಜ ಸುಂಟಾನ ಮತ್ತು ಲಿಂ. ಯಮುನಾಬಾಯಿ ಕಲಕೇರಿ ಇವರ ಸ್ಮರಣಾರ್ಥ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ: ೨೬.೦೯.೨೦೨೦ ವೇದಿಕೆಯಲ್ಲಿ: ಬಸವರಾಜ ನಾಲತವಾಡ, ನಿರ್ಮಲಾ ಸುಂಟಾನ, ಬಾಪುಗೌಡ ಪಾಟೀಲ, ಎಸ್. ಬಂಗಾರಿ. ಎಸ್.ಎಸ್. ಬಡಿಗೇರ

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Sathyasri Printers Pvt Ltd., No. 16/1, 3rd Cross, 2nd Main, Kasturiba Nagar, Bengaluru-560 026
Editor : Dr. M.S. Ashadevi